1827

# ಚಿರಂಜೀವಿಗಳು

ಡಿ. ಕೃಷ್ಣ ಐಯ್ಯಂಗಾರ್, ಎಂ.ಎ.





ಸುದರ್ಶನಂ ಅಂಡ್ ಕೋ
ಅವೆನ್ಯೂ ರೋಡ್ – ಬೆಂಗಳೂರು

[ ಬೆಲೆ ೧ ರೂಪಾಯಿ

ಡಿ. ಕೃಷ್ಣ ಅಯ್ಯಂಗಾರ್, ಎಂ. ಎ
ಗ್ರಂಥಕರ್ತರು : ರೈತನ ಪ್ರಪಂಚ, ರೈತನ ಏಳಿಗೆ, ರೈತನ ಬಾಳು, ರೈತನ ಸಮಾಜ
ಇತ್ಯಾದಿ

ಪ್ರಕಾಶಕರು :
ಸುದರ್ಶನಂ ಅಂಡ್ ಕಂಪನಿ
ಅವೆನ್ಯೂ ರೋಡ್
ಬೆಂಗಳೂರು 2

# ಪೀಠಿಕೆ

ಅಶ್ವತ್ಥಾಮಾ ಬಲಿರ್ವ್ಯಾಸೋ ಹನೂಮಾಂಶ್ಚ ವಿಭೀಷಣಃ ।
ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ ॥

ಅಶ್ವತ್ಥಾಮ, ಬಲಿಚಕ್ರವರ್ತಿ, ವೇದವ್ಯಾಸ, ಆಂಜನೇಯ, ವಿಭೀಷಣ, ಕೃಪಾಚಾರ್ಯ, ಪರಶುರಾಮ – ಇವರು ಏಳು ಜನರು ಚಿರಂಜೀವಿಗಳೆಂದು ಸ್ಮರಿಸಿ, ಅಭ್ಯಂಜನ ಸ್ನಾನಕ್ಕೆ ಎಣ್ಣೆಯನ್ನು ಒತ್ತಿಕೊಳ್ಳುವಾಗ ಹೇಳುವುದು ವಾಡಿಕೆ. ಈ ಶ್ಲೋಕವನ್ನು ಯಾರು, ಯಾವಾಗ, ಯಾವ ಸಂದರ್ಭದಲ್ಲಿ ಹೇಳಿದರು ಎಂಬುದನ್ನು ನಿರ್ಧರಿಸುವುದು ಕಷ್ಟ. ಅಂತೂ ಇದೇನೋ ಬಳಕೆಯಲ್ಲಿ ಬಂದಿದೆ. ಅರ್ಥವನ್ನು ವಿಚಾರಮಾಡದೆಯೇ ಈ ಪದ್ಧತಿ ಆಚರಣೆಯಲ್ಲಿದೆ. ಇಂತಹವು ಇನ್ನೂ ಎಷ್ಟೋ ನಮ್ಮ ಸಮಾಜದಲ್ಲಿ ಬೇರೂರಿ ಬಂದಿವೆ.

ಚಿರಂಜೀವಿ ಎಂಬ ಪದದ ಅರ್ಥ ಶಾಶ್ವತವಾಗಿರುವವರು ಎಂದಾಗುವುದು. ಶಾಶ್ವತ ಎಂದರೆ ಈ ಜಗತ್ತು ಇರುವವರೆಗೆ ಎಂದೇ ? ಅಥವಾ ಒಂದು ಯುಗದ ಅಂತ್ಯಕಾಲದವರೆಗೆ ಎಂದೇ ? ಇದನ್ನು ನಿರ್ಧರಿಸುವುದು ಹೇಗೆ ? ಬ್ರಹ್ಮನಾದಿಯಾಗಿ ಎಲ್ಲ ದೇವತೆಗಳಿಗೂ ಪುನರ್ಜನ್ಮವುಂಟು ಎಂದು ಶ್ರೀ ಕೃಷ್ಣನು ಗೀತೆಯಲ್ಲಿ ಹೇಳಿರುವಾಗ, ಮಾನವರಾದ ಈ ಏಳು ಜನರಿಗೆ ಚಿರಂಜೀವತ್ವ ಹೇಗುಂಟಾಯಿತು ಎಂಬುದಕ್ಕೆ ಸರಿಯಾದ ಉತ್ತರ ದೊರೆಯುವುದಿಲ್ಲ. ಅದು ಏನೇ ಇರಲಿ, ಈ ಏಳು ಜನರೂ ಪುರಾಣ ಪ್ರಸಿದ್ಧರಾದ ವ್ಯಕ್ತಿಗಳು, ಮಹಿಮಾವಂತರು. ಭಗವಂತನ ಕೃಪೆಗೆ ಪಾತ್ರರಾದವರು. ಅವನ ಅಂಶದಿಂದ ಹುಟ್ಟಿದವರು. ಒಂದಲ್ಲ ಇನ್ನೊಂದು ವಿಧದಲ್ಲಿ ಭಗವಂತನನ್ನು ಮೆಚ್ಚಿಸಿ, ಅವನಿಂದ ವರ ಪಡೆದವರು. ಈ ದೃಷ್ಟಿಯಿಂದ ಇವರೆಲ್ಲ ಸ್ಮರಣೆಗೆ ಯೋಗ್ಯರಾದ ಪೂಜ್ಯ ವ್ಯಕ್ತಿಗಳು. ಇವರ ಚಿರಂಜೀವತ್ವವೆಲ್ಲ ವರ ಪ್ರದಾನವಾದುದೆಂದು ಹೇಳಬಹುದು.

ಮಾನವರೆಲ್ಲ ಚೇತನರು. ಇವರಲ್ಲಿ ಬದ್ಧರು, ಮುಕ್ತರು, ನಿತ್ಯರು ಎಂಬುದಾಗಿ ಮೂರು ವಿಧ. ಸಾಮಾನ್ಯವಾಗಿ ಕರ್ಮಪಾಶಕ್ಕೆ ಸಿಕ್ಕಿದ

ಮಾನವರೆಲ್ಲ ಬದ್ಧರು. ಭಕ್ತಿ, ಪ್ರಪತ್ತಿ—ಮುಂತಾದ ಉಪಾಯವನ್ನು ಅನುಸರಿಸಿ, ಪುನರ್ಜನ್ಮದ ಸೆರೆಯಿಂದ ತಪ್ಪಿಸಿಕೊಂಡವರು ಮುಕ್ತರು. ಇವರಿಗೆ ಪುನರ್ಜನ್ಮವಿಲ್ಲ. ಯಾವತ್ತಿಗೂ ಜನನ ಮರಣವಿಲ್ಲದೆ ಕರ್ಮ ಪಾಶಕ್ಕೂ ಒಳಪಡದೆ, ಭಗವಂತನ ಇಚ್ಛಾನುಸಾರವಾಗಿ, ಅವನ ಸೇವೆ ಯಲ್ಲಿ ನಿರತರಾಗಿರತಕ್ಕವರು ನಿತ್ಯರು. ಅನಂತ, ಗರುಡ, ವಿಷ್ವಕ್ಸೇನಾದಿ ಗಳೆಲ್ಲ ಈ ಗುಂಪಿಗೆ ಸೇರಿದವರು. ಹೀಗಿರುವಾಗ ಚಿರಂಜೀವಿಗಳನ್ನು ಯಾವ ಗುಂಪಿಗೆ ಸೇರಿಸಬಹುದು ? ಇವರೆಲ್ಲ ಮಾನವರಲ್ಲವೇ ? ಚೇತನರು ತಾನೇ ? ಇವರು ಹೇಗೆ ಜನನ ಮರಣಗಳಿಂದ ತಪ್ಪಿಸಿಕೊಂಡರು ? ಇವೇ ಮುಂತಾದ ಪ್ರಶ್ನೆಗಳಿಗೆ ಉತ್ತರ ದೊರೆಯುವುದು ಕಷ್ಟ.

ಈ ಚಿರಂಜೀವಿಗಳಲ್ಲಿ ವ್ಯಾಸನು ಹೊರತು, ಉಳಿದವರಿಗೆ ಸ್ಥಿರಜೀವಿತ್ವ ಬಂದುದು ತಪಸ್ಸಿನ ಫಲವಾದ ವರಬಲದಿಂದ. ವ್ಯಾಸನು ನಾರಾಯಣಾಂಶ ದಿಂದ ಹುಟ್ಟಿದವನು. ಪ್ರತಿ ಮನ್ವಂತರದಲ್ಲಿಯೂ, ತನ್ನ ಯೋಗಮಹಿಮೆ ಯಿಂದ ಜನ್ಮವೆತ್ತಿ ವೇದ ವಿಭಾಗಮಾಡಿ, ಜ್ಞಾನೋಪದೇಶ ಮಾಡುತ್ತಾನೆ. ಇವನು ಚತುರ್ಮುಖ ಬ್ರಹ್ಮನ ಸೃಷ್ಟಿಗೆ ಹೊರಗಾಗಿದ್ದಾನೆಂದು ಹೇಳ ಬಹುದು. ಕೃಷ್ಣದ್ವೈಪಾಯನರು ಸಾಕ್ಷಾತ್ ನಾರಾಯಣನ ಅವತಾರ ಎಂದೇ ಹೇಳಲಾಗಿದೆ. ವ್ಯಾಸಮಹರ್ಷಿಯ ನಾಮವನ್ನು ಉಚ್ಚಾರಣೆ ಮಾಡಿದ ಕೂಡಲೇ, ಭೀಷ್ಮನು ಕೈಮುಗಿದು ಗೌರವ ಸಲ್ಲಿಸುತ್ತಿದ್ದನಂತೆ. ಹನುಮಂತನು ಸಾಮಾನ್ಯನೇ ? ಇಂದ್ರ ವರುಣ ಯಮ ಬ್ರಹ್ಮಾದಿಗಳೆಲ್ಲ ಅವನು ಮಗುವಾಗಿದ್ದಾಗಲೇ ಅವನನ್ನು ಆಶೀರ್ವದಿಸುವರು. ವರವನ್ನು ಕೊಡುವರು. ಅವನ ಅಮಾನುಷ ಸಾಹಸ ಕಾರ್ಯಗಳೂ, ಅತಿ ವಿನಯ ಭಕ್ತಿಯೂ, ಸಮಸ್ತ ವಸ್ತುಜ್ಞಾನವೂ, ಅಪಾರ ಪಾಂಡಿತ್ಯವೂ ಅವನಿಗೆ ಶಾಶ್ವತ ಪದವಿಯನ್ನು ಗಳಿಸಿಕೊಟ್ಟವೆ.

ವಿಭೀಷಣನಿಗೆ, ಅವನ ಅನನ್ಯ ಭಕ್ತಿಯುತ ತಪಸ್ಸನ್ನು ಮೆಚ್ಚಿ ಬ್ರಹ್ಮನೇ ವರಕೊಡುವನು. ಸದಾ ಧರ್ಮನಿರತನಾಗಿರುವಂತೆ ಹರಸು ವನು. ಎಲ್ಲರಿಗೂ ಧರ್ಮವನ್ನು ಬೋಧಿಸುವನು. ಧರ್ಮಾತ್ಮ ನಾದುದರಿಂದ ಅವನಿಗೆ ಅಮರತ್ವವುಂಟಾಯಿತು. ಬಲಿಗೂ ಹಾಗೆಯೇ. ವಾಮನರೂಪಿಯಾದ ಭಗವಂತನಿಂದ ಇವನಿಗೆ ಚಿರಜೀವಿತ್ವ ಬಂದಿತು.

ಇಂದ್ರ ಪದವಿಯನ್ನೇ ಇವನಿಗೆ ಪರಮಾತ್ಮನು ದಯಪಾಲಿಸಿದನು. ಅಂದರೆ ಇಂದ್ರನಿಗೆ ಎಷ್ಟು ಚಿರಜೀವಿತ್ವವೋ, ಅಷ್ಟು ಮಾತ್ರ ಇವನಿಗೂ ಉಂಟೆಂದಾಯಿತು. ಒಂದು ಕಲ್ಪ ಪ್ರಮಾಣ ಕಾಲ ತಾನೆ ?

ಅಶ್ವತ್ಥಾಮ, ಪರಶುರಾಮ, ಕೃಪ—ಈ ಮೂವರೂ ರುದ್ರೋಪಾಸಕರು. ಮಹಾದೇವನ ಕೃಪೆಗೆ ಪಾತ್ರರಾದವರು. ರುದ್ರಾಂಶ ಸಂಭೂತರು. ಅಶ್ವತ್ಥಾಮ, ಪರಶುರಾಮರು ಕ್ರೂರ ಕರ್ಮ ನಡೆಸಿದರು. ಹಾಗೆ ಮಾಡಿದುದೂ ಕೂಡ ರುದ್ರ ಪ್ರೀತ್ಯರ್ಥವಾಗಿಯೇ. ಅವರಿಗೆ ಬಂದ ಚಿರಜೀವಿತ್ವವೂ ಕೂಡ ರುದ್ರದತ್ತವಾದುದು.

ಈ ಏಳು ಜನರಿಗೂ ಸಂದರ್ಭೋಚಿತವಾಗಿ ಚಿರಜೀವಿತ್ವವನ್ನು ಹೇಳಬೇಕೇ ವಿನಹ, ಅವರು ನಿತ್ಯರಲ್ಲ. ಬ್ರಹ್ಮ, ರುದ್ರ, ಇಂದ್ರಾದಿಗಳೇ ಮಹಾ ಪ್ರಳಯಕಾಲದಲ್ಲಿ ನಾಶಹೊಂದುವರೆಂದು ಹೇಳಿದಮೇಲೆ, ಇವರಿಂದ ವರಪಡೆದ ವ್ಯಕ್ತಿಗಳು ಅಷ್ಟೇ ಪರಿಮಿತಿಯ ಆಯಸ್ಸು ಪಡೆದವರೆಂದೇ ಹೇಳಬೇಕಲ್ಲವೇ ? ಶಾಶ್ವತವಾಗಿ ಹೇಗೆ ತಾನೆ ಜೀವಿಸಿರಬಲ್ಲರು ? ಸ್ಥಿರಜೀವಪಟ್ಟ ಹೇಗೆ ತಾನೆ ಬಂದೀತು ?

ಸಾಮಾನ್ಯ ಚೇತನರ ಜೀವಿಕೆಗಿಂತ, ದೇವತೆಗಳ ಆಯುಃಪರಿಮಿತಿಯು ದೀರ್ಘವಾದುದು. ಬ್ರಹ್ಮ ರುದ್ರಾದಿಗಳ ಸ್ಥಿರತ್ವವು ಇನ್ನೂ ದೀರ್ಘವಾದುದೆಂದು ಹೇಳಬಹುದು. ಇವರ ಕೃಪೆಗೆ ಪಾತ್ರರಾಗಿ, ವರವನ್ನು ಪಡೆದ ಈ ಮಹಾ ವ್ಯಕ್ತಿಗಳೂ ಕೂಡ, ಇವರಷ್ಟೇ ಸ್ಥಿರತ್ವವನ್ನು ಪಡೆದವರೆಂದು ಹೇಳಬಹುದು. ಸಾಮಾನ್ಯ ಚೇತನರಿಗಿಂತಲೂ ಹೆಚ್ಚು ಕಾಲದ ಸ್ಥಿರತ್ವ ಇವರಿಗೆ ವರಪ್ರದಾನ ರೂಪದಲ್ಲಿ ಬಂದಿರುವುದರಿಂದ, ಇವರು ಚಿರಂಜೀವಿಗಳೆಂದು ಹೇಳಲಾಗಿದೆ. ಅಂದಮಾತ್ರಕ್ಕೆ ಇವರಿಗೆ ಶಾಶ್ವತವಾದ ಸ್ಥಿರತ್ವ ಬಂದಿದೆ ಎಂದು ಹೇಳುವುದಕ್ಕಾಗುವುದಿಲ್ಲ.

ಶಾಶ್ವತ ಸ್ಥಿರ ಜೀವಿಕೆ ಇರಲಿ, ಇಲ್ಲದಿರಲಿ, ಇವರು ಮಹಾಮಹಿಮರು. ಮಾನವಾತೀತ ಕಾರ್ಯಗಳನ್ನು ಮಾಡಿ ಯಶಸ್ಸು ಗಳಿಸಿದ್ದಾರೆ. ಮಾನವಕೋಟಿಗೆ ಮಾರ್ಗದರ್ಶಕರಾಗಿದ್ದಾರೆ. ಇವರ ಜೀವನದಿಂದ ಮಾನವನು ಸರ್ವೋತ್ತಮ ಪಾಠ ಕಲಿಯಬಹುದು. ಇವರೆಲ್ಲ ಭಾರತೀಯ ಸಂಸ್ಕೃತಿಯ ಪೋಷಕರು. ಪುಣ್ಯಕಾರ್ಯಗಳನ್ನು ಮಾಡಿ

ತೋರಿಸಿದ್ದಾರೆ. ತಪಸ್ಸು, ಧ್ಯಾನ, ಪ್ರಾರ್ಥನೆ ಇವುಗಳಿಂದುಂಟಾಗುವ ಉತ್ತಮ ಫಲಗಳನ್ನು ತಿಳಿಸಿಕೊಟ್ಟಿದ್ದಾರೆ. ಪ್ರತಿಯೊಬ್ಬರೂ ಒಂದೊಂದು ಗುಣವನ್ನು ಪ್ರದರ್ಶನಮಾಡಿ, ಉತ್ತಮ ಆದರ್ಶವ್ಯಕ್ತಿಗಳಾಗಿದ್ದಾರೆ. ಅವರ ಸದ್ಗುಣಗಳು, ಮಾನವನಿಗೆ ಅನುಕರಣ ಯೋಗ್ಯವಾಗಿವೆ. ಸದಾ ಕಾಲಕ್ಕೂ ಉತ್ತಮ ನಿದರ್ಶನಗಳಾಗಿ ನಿಲ್ಲುತ್ತವೆ. ಆದುದರಿಂದ ಸ್ಮರಣೆಗೆ ಅರ್ಹವಾಗಿವೆ.

ಇಂದಿನ ಜಗತ್ತಿಗೆ, ಈ ಏಳು ಜನ ಮಹಾವ್ಯಕ್ತಿಗಳ ಜೀವನ ಚರಿತ್ರೆ ಏನಾದರೂ ಸಂದೇಶ ಸಾರುತ್ತದೆಯೇ ಎಂಬುದನ್ನು ಇಲ್ಲಿ ವಿಚಾರಮಾಡ ಬಹುದು. ದೇವರ ಹೆಸರನ್ನು ಹೇಳಿ, ಯಾವ ವಿಧದಲ್ಲಿಯಾದರೂ, ಯಾರನ್ನಾದರೂ, ಏತರಿಂದಾದರೂ ಪೂಜಿಸಿದರೆ, ಅದು ದೇವರಿಗೇ ಸಲ್ಲು ವುದು ಎಂಬುದು ನಮ್ಮ ನಂಬಿಕೆ. ಇದರಿಂದ ಆತ್ಮಜ್ಞಾನ ಹುಟ್ಟುವುದು. ಪರಮತ ಸಹಿಷ್ಣುತೆ ವೃದ್ಧಿಯಾಗುವುದು. ಧರ್ಮಾಕಾಂಕ್ಷೆ, ದೈವಾವ ಲಂಬನ, ಭಕ್ತಿ—ಮುಂತಾದ ಗುಣಗಳು ಹೆಚ್ಚುವುವು. ನಾವು ಪ್ರಪಂಚ ದೊಡನೆ ಹೊಂದಿಕೊಂಡು ಹೋಗಬೇಕಾದರೆ, ನಮ್ಮ ಆತ್ಮಗುಣವು ವಿಕಾಸ ವಾಗಬೇಕಾದುದು ಬಹು ಮುಖ್ಯ. ಈ ಗುಣವು ಜೀವನದ ಹವ್ಯಾಸ ವಾಗಬೇಕು. ಇದು ಮುಖ್ಯವಾಗಿ ವೃದ್ಧಿಯಾದರೆ, ಪ್ರಾಣಿ ಸಾಮಾನ್ಯದಲ್ಲಿ ದಯೆ, ಕ್ಷಮೆ, ಶುಚಿತ್ವ, ಒಳ್ಳೆಯ ಆಲೋಚನೆ, ನಡತೆ, ಕಷ್ಟಕಾರ್ಪಣ್ಯ ವಿಲ್ಲದೆ ಅತ್ಯಾಸೆ ಇಲ್ಲದಿರುವುದು....ಇವೇ ಮುಂತಾದ ಆತ್ಮಗುಣಗಳು ನೆಲೆಯಾಗಿ ನಿಲ್ಲುವುವು. ಇವುಗಳಿಂದ ನೈತಿಕ, ಧಾರ್ಮಿಕ ಗುಣಗಳು ಹಸನಾಗುವುವು. ಇವುಗಳನ್ನೇ ನಮ್ಮ ಧರ್ಮಗ್ರಂಥಗಳೂ, ಅವತಾರ ಪುರುಷರೂ, ಉದಾತ್ತವ್ಯಕ್ತಿಗಳೂ ಬೋಧಿಸುವುದು. ಈ ಗುಣಗಳು ವ್ಯಕ್ತಿಗಳಲ್ಲಿ ಹೆಚ್ಚಿದಂತೆಲ್ಲ ಸಮಾಜದ ಮತ್ತು ರಾಷ್ಟ್ರದ ಜೀವನ ಉತ್ತಮ ವಾಗುವುದು. ಹೀಗಾದರೆ ಯಜ್ಞ, ದಾನ, ತಪಸ್ಸು ಹೆಚ್ಚಿ ಜನಜೀವನ ಸುಭಿಕ್ಷವಾಗುವುದು. ಸುಖ ಶಾಂತಿ ನೆಲಸುವುದು. ಅಂತಹ ಸಮಾಜ ದಲ್ಲಿ ಆಹಾರ, ವಿಹಾರ, ನಿದ್ರೆ, ಎಚ್ಚರಕಾರ್ಯ—ಎಲ್ಲವೂ ಮಿತವಾಗಿ ನಡೆದು, ಜೀವನದ ಸರ್ವಾಂಶಗಳೂ ಉತ್ತಮವಾಗುವುವು. ಇದರಿಂದ ಜನರು ಧರ್ಮನಿರತರಾಗಿ ಕರ್ಮಶೀಲರಾಗಿ ಸುಖಜೀವನ ನಡೆಸುವಂತಾ

ಗುವರು. ಅಹಿಂಸಾವಾದಿಗಳಾಗುವರು. ಧರ್ಮಸಂಸ್ಥಾಪನೆಗೂ, ನ್ಯಾಯ ಪರಿಪಾಲನೆಗೂ ಕೂಡ ಇಂತಹ ಪರಿಸ್ಥಿತಿ ಸಹಾಯಮಾಡುವುದು. ಚಿರಂಜೀವಿಗಳ ಜೀವನ ಚರಿತ್ರೆಯು ಇಂತಹ ಮನೋಭಾವನೆಯನ್ನು ಹರಡುವುದಕ್ಕೆ ಹೆಚ್ಚು ಅನುಕೂಲವಾಗಿದೆ, ಸಹಾಯಕವಾಗಿದೆ.

ಇಂದು ಜನರ ಕಷ್ಟಕಾರ್ಪಣ್ಯಗಳು ಹೆಚ್ಚುತ್ತಿವೆ. ದುಃಖ-ಸಂಕಟಗಳು ವೃದ್ಧಿಯಾಗುತ್ತಿವೆ. ಬಡವರು ಕಡು ಬಡವರಾಗುತ್ತಿದ್ದಾರೆ. ಶ್ರೀಮಂತರು ಹೆಚ್ಚಿನ ಶ್ರೀಮಂತರಾಗುತ್ತಿದ್ದಾರೆ. ಜನರು ಸ್ವತಂತ್ರರಾಗಿರಬೇಕೆಂದು ಇಷ್ಟ ಪಡುತ್ತಿದ್ದಾರೆ. ಯಾವ ನಿಯಮ, ಕಟ್ಟಳೆಗಳೂ ಇರಕೂಡದೆಂದು ಆಶಿಸುತ್ತಿದ್ದಾರೆ, ರಾಜ-ಪ್ರಜೆ, ತಂದೆ-ಮಗ, ಗುರು-ಶಿಷ್ಯ, ದೇವರು-ಭಕ್ತ—ಇವರ ಸಂಬಂಧವಾಗಿ ಹಿಂದೆ ಇದ್ದ ಗೌರವ, ಭಕ್ತಿ ಎಲ್ಲವೂ ಬಹುಮಟ್ಟಿಗೆ ಕಡಿಮೆಯಾಗುತ್ತಿದೆ. ಸಮಾಜದಲ್ಲಿ ಏರುಪೇರುಗಳಿರಕೂಡದು. ಮೇಲು-ಕೀಳು, ಹಿರಿದು-ಕಿರಿದು-ಎಂಬ ಭಾವನೆಯನ್ನು ತೊಡೆದುಹಾಕಬೇಕೆಂದು ಕೆಲವರು ಹೇಳುತ್ತಿದ್ದಾರೆ. ಎಲ್ಲಕ್ಕೂ ಹಣವೇ ಮುಖ್ಯವಾಗುತ್ತಿದೆ, ಅನ್ಯಾಯಕ್ಕೂ, ಅಧರ್ಮಕ್ಕೂ ಹೆದರದೆ, ಹಣ ಸಂಪಾದನೆಯೇ ಮುಖ್ಯವೆಂದು ಭಾವಿಸಲಾಗುತ್ತಿದೆ. ನಿರುದ್ಯೋಗ, ಹಸಿವು, ಅಸೂಯೆ, ಅತೃಪ್ತಿಗಳೂ ಹೆಚ್ಚುತ್ತಿವೆ. ಇದರಿಂದ ಅನ್ಯಾಯ, ಅಧರ್ಮವು ಹೆಚ್ಚಲೇಬೇಕು ತಾನೆ ? ಇಂತಹ ಇಂದಿನ ಜಗತ್ತಿಗೆ ಈ ಮಹಾ ವ್ಯಕ್ತಿಗಳ ಜೀವನ ಚರಿತ್ರೆ ಸಾರುವುದೇನು ?

ಜನರಲ್ಲಿ ಧರ್ಮಬುದ್ಧಿ ಬೆಳೆಯಬೇಕು. ಅರ್ಥ ಕಾಮಗಳು ಧರ್ಮಕ್ಕೆ ಅನುಸಾರವಾಗಿರಬೇಕೇ ವಿನಹ ವಿರೋಧವಾಗಿರಬಾರದು. ಜನರು ತ್ಯಾಗಮಾಡಿದ ಹೊರತು ಸುಖವುಂಟಾಗದು. ಜನರು ತಮ್ಮ ಜೀವನದಲ್ಲಿ ಭೋಗಕ್ಕಿಂತ ತ್ಯಾಗಕ್ಕೆ ಹೆಚ್ಚು ಗಮನಕೊಡಬೇಕು. ಅರ್ಥ ಸಂಪಾದನೆಯ ಗುರಿ ಬರೀ ಭೋಗವಾಗಿರಬಾರದು. ಲೋಭ, ದುರಾಸೆ, ದ್ವೇಷಗಳನ್ನು ಜನರು ಕಡಿಮೆ ಮಾಡಿಕೊಳ್ಳಬೇಕು. ಗುರಿಹಿರಿಯರಲ್ಲಿ ವಿನಯದಿಂದ ವರ್ತಿಸಬೇಕು. ಜಗತ್ತಿಗೆ ಶಾಂತಿ ದೊರೆಯಬೇಕಾದರೆ, ನೈತಿಕ ಧಾರ್ಮಿಕ ಮಾರ್ಗದಿಂದ ವಿನಹ, ಮದ್ದುಗುಂಡು, ಯುದ್ಧದಿಂದ ಖಂಡಿತ ದೊರೆಯುವುದಿಲ್ಲ. ಇಂತಹ ಶಾಂತಿಮಾರ್ಗ ಕಾಣಬೇಕಾದರೆ,

ಸಂಸ್ಕೃತಿಯು ಸಾಧಕವಾಗಬೇಕು. ನಮ್ಮ ಸಂಸ್ಕೃತಿ ಸಂಪನ್ನರು ಈ ಚಿರಂಜೀವಿಗಳು. ಭಾರತೀಯ ಸಂಸ್ಕೃತಿಯ ಪುನರುದ್ಧಾರಕ್ಕಾಗಿ ಅದರ ಪರಿಪೋಷಣೆಗಾಗಿ, ಈ ಚಿರಂಜೀವಿಗಳ ಚರಿತ್ರೆ ಸರ್ವೋತ್ತಮ ನಿದರ್ಶನವಾಗಿದೆ. ಅವುಗಳನ್ನು ಮನನಮಾಡಿದರೆ, ಅವುಗಳಲ್ಲಿ ಅಡಗಿರುವ ಸರ್ವೋತ್ತಮ ಗುಣಗಳಲ್ಲಿ ಒಂದನ್ನಾದರೂ ಸರಿಯೇ ಆಚರಿಸಿದರೂ ಸಾಕು. ಜೀವನ ಭವ್ಯವಾಗುವುದು. ಸುಖಶಾಂತಿಯಿಂದಿರಲು ಸಹಾಯಕವಾಗುವುದು. ಸಂಸ್ಕೃತಿ ಪ್ರಚಾರಕ್ಕೂ ಕೂಡ, ಈ ಜೀವನ ಚರಿತ್ರೆಗಳು ಉತ್ತಮ ಉದಾಹರಣೆಯಾಗಿವೆ.

ಈ ಚಿರಂಜೀವಿಗಳೆಲ್ಲ ಭಾರತ, ರಾಮಾಯಣಗಳಲ್ಲಿ ಬರುವ ಉದಾತ್ತ ವ್ಯಕ್ತಿಗಳು. ರಾಮಾಯಣ ಭಾರತವು ಹಿಂದೂ ಸಂಸ್ಕೃತಿಯ ಎರಡು ದೊಡ್ಡ ಕೈಗಂಬಗಳು. ಇವೆರಡೂ ಆದರ್ಶ ಕಾವ್ಯಗಳು. ಇವುಗಳಲ್ಲಿ ಬರುವ ಪಾತ್ರಗಳು ಆದರ್ಶ ವ್ಯಕ್ತಿಗಳು. ಮಾನವನು ಸುಸಂಸ್ಕೃತನಾಗುವುದಕ್ಕೆ ಸಹಾಯಕವಾದ ವಿಷಯಗಳು ಈ ಜೀವನ ಚರಿತ್ರೆಗಳಲ್ಲಿ ಅಡಗಿವೆ. ಈ ಜೀವನ ಚರಿತ್ರೆಗಳನ್ನು ಎಷ್ಟೆಷ್ಟು ಹೆಚ್ಚು ಓದಿ ಮನನಮಾಡಿದರೆ, ಅಷ್ಟಷ್ಟು ಹೆಚ್ಚಾಗಿ ಜೀವನ ಹಸನಾಗುವುದು. ಬಾಳು ಭವ್ಯವಾಗುವುದು.

ಮಹಾ ಪುರುಷರ ಜೀವನ ಚರಿತ್ರೆಯು ಮಾನವರಿಗೆ ಬೋಧಪ್ರದವಾಗಿರುವುದಲ್ಲದೆ, ಮಾರ್ಗದರ್ಶಕವೂ ಆಗಿದೆ. ಮಾನವನ ಭಾವೀ ಜೀವನವನ್ನೂ, ನಡತೆಯನ್ನೂ, ಪದ್ಧತಿಯನ್ನೂ ಉತ್ತಮಪಡಿಸುವುದಕ್ಕೆ ಇಂತಹ ಜೀವನ ಚರಿತ್ರೆಗಳು ಸರ್ವೋತ್ತಮವಾದ ಸಾಧನೆಗಳಾಗಿವೆ. ಇವುಗಳಿಂದ ಚಿಕ್ಕವರು, ದೊಡ್ಡವರಾದಿಯಾಗಿ ಎಲ್ಲರೂ ಉತ್ತಮ ಪಾಠ ಕಲಿಯಬಹುದು. ಇದರ ಜೊತೆಗೆ, ಈ ಮಹಾತ್ಮರ ಆಶೀರ್ವಾದ ಮಾನವಕೋಟಿಯ ಮೇಲೆ ಇರುವುದು. ಅವರು ಹೇಳಿರುವ ಅಮೃತ ವಚನಗಳು, ಮಾನವಕೋಟಿಗೆ ಮಾರ್ಗದರ್ಶಕವಾಗಿ ನಿಲ್ಲಬೇಕು. ಇದೇ ಗ್ರಂಥಕರ್ತನ ಹಾರೈಕೆ. ಈ ಗ್ರಂಥವನ್ನು ಓದಿದ ಕೆಲವರಲ್ಲಿಯಾದರೂ, ನಿರೀಕ್ಷಿಸಿದ ಫಲವುಂಟಾದರೆ, ಗ್ರಂಥಕರ್ತನ ಶ್ರಮ ಸಾರ್ಥಕವಾಯಿತೆಂದು ಭಾವಿಸುವನು.

ಬೆಂಗಳೂರು ಸುದರ್ಶನಂ ಕಂಪನಿಯವರು ಈ ಪುಸ್ತಕದ ಪ್ರಕಟನಾ ಕಾರ್ಯವನ್ನು ವಹಿಸಿಕೊಂಡು ಉಪಕಾರ ಮಾಡಿದ್ದಾರೆ. ಬೆಂಗಳೂರು ಪ್ರೆಸ್ ಮಾಲೀಕರು ಈ ಪುಟ್ಟ ಪುಸ್ತಕವನ್ನು ಅಂದವಾಗಿಯೂ, ಜಾಗ್ರತೆಯಾಗಿಯೂ ಅಚ್ಚು ಮಾಡಿಕೊಟ್ಟಿದ್ದಾರೆ. ಈ ಪುಸ್ತಕದ ಎರಡನೆಯ ಮತ್ತು ಮೂರನೆಯ ಮುದ್ರಣವನ್ನು, ಈಸ್ಟರ್ನ್ ಪ್ರೆಸ್ ಮಾಲೀಕರು, ಬಹು ಶೀಘ್ರವಾಗಿ ಉತ್ತಮ ರೀತಿಯಲ್ಲಿ ಮುದ್ರಿಸಿ ಕೊಟ್ಟಿದ್ದಾರೆ. ಇವರಿಗೆಲ್ಲ ಗ್ರಂಥಕರ್ತನು ತನ್ನ ಧನ್ಯವಾದಗಳನ್ನು ಅರ್ಪಿಸುವನು.

ಬೆಂಗಳೂರು,
ಜನವರಿ 1956

ಡಿ. ಕೃಷ್ಣ ಅಯ್ಯಂಗಾರ್

# ಚಿರಂಜೀವಿಗಳು

---

## ಬಲಿಚಕ್ರವರ್ತಿ

ಪೂರ್ವಕಾಲದಲ್ಲಿ ರಾಕ್ಷಸರಿಗೂ, ದೇವತೆಗಳಿಗೂ ಯುದ್ಧ ನಡೆಯುತ್ತಲೇ ಇತ್ತು. ರಾಕ್ಷಸರು ದೇವತೆಗಳಿಗೆ ತೊಂದರೆಕೊಡುತ್ತಲೇ ಇದ್ದರು. ರಾಕ್ಷಸರ ಕಾಟವನ್ನು ತಪ್ಪಿಸುವುದಕ್ಕಾಗಿ ದೇವರು ಅನೇಕ ಅವತಾರಗಳನ್ನೆತ್ತಿದನು. ಒಂದೊಂದು ಅವತಾರದಲ್ಲಿ ಒಬ್ಬೊಬ್ಬ ರಾಕ್ಷಸನನ್ನು ಕೊಂದರೂ, ದೈತ್ಯರಿಗೂ ದೇವತೆಗಳಿಗೂ ಇದ್ದ ಹಗೆತನ ಹೋಗಲೇ ಇಲ್ಲ. ವಿಷ್ಣುವು ನರಸಿಂಹಾವತಾರಮಾಡಿ ಹಿರಣ್ಯಕಶಿಪುವನ್ನು ಕೊಂದರೂ ಕೂಡ, ದೇವಾಸುರರ ದ್ವೇಷ ಹಾಗೆಯೇ ಇದ್ದಿತು. ರಾಕ್ಷಸರು ದೇವತೆಗಳಿಗೆ ತಕ್ಕ ಶಿಕ್ಷೆಮಾಡಬೇಕೆಂದು ಸಮಯ .ಕಾಯುತ್ತಿದ್ದರು. ಅವರಿಗೊಬ್ಬ ಪರಾಕ್ರಮಶಾಲಿಯಾದ ನಾಯಕ ಬೇಕಾಗಿತ್ತು. ರಾಕ್ಷಸರೆಲ್ಲಾ ಒಟ್ಟಿಗೆ ಸೇರಿ ಪರಮಭಕ್ತನಾದ ಪ್ರಹ್ಲಾದನ ಮೊಮ್ಮಗನಾದ ಬಲಿಯೇ ತಮ್ಮ ರಾಜನಾಗಿರಬೇಕೆಂದು ನಿಶ್ಚಯಮಾಡಿದರು.

ಬಲಿಯು ಮಹಾಪರಾಕ್ರಮಿ, ಸತ್ಯವಂತ. ಯಾವಾಗಲೂ ಧರ್ಮಮಾರ್ಗದಲ್ಲಿ ನಡೆಯತಕ್ಕವನು. ಯೋಗೀಶ್ವರರಲ್ಲಿ ಅವನು ಅಗ್ರಗಣ್ಯ. ಮಹಾಗುಣವಂತ. ಹೀಗಿದ್ದರೂ ಕೂಡ ಅವನು ರಾಕ್ಷಸರಿಗೆಲ್ಲಾ ರಾಜ. ದೇವತೆಗಳು ತಮ್ಮ ರಾಜ್ಯವನ್ನು ಅಪಹರಿಸುವರೆಂದೂ, ಅದಕ್ಕಾಗಿ ಅವರೊಡನೆ ಯುದ್ಧಮಾಡಬೇಕೆಂದೂ ರಾಕ್ಷಸರು ಬಲಿರಾಜನನ್ನು ಬಲವಂತಪಡಿಸಿದರು. ಹೀಗಿರುವಾಗ ಒಂದು ಸಲ ಶಾಂಡಿಲಿಯ ಮಗನಾದ ಅಗ್ನಿಯು ದೇವತೆಗಳ ಪರವಾಗಿ ಯುದ್ಧಮಾಡಿ ಅನೇಕ ರಾಕ್ಷಸರನ್ನು ನಾಶಮಾಡಿದನು. ಇದನ್ನು ಕಂಡು ಬಲಿಗೆ ಕೋಪವುಂಟಾಯಿತು. ತಾನೇ ಸ್ವತಃ ಯುದ್ಧಮಾಡಿ ಶತ್ರುಗಳನ್ನು ಜಯಿಸಿದನು. ಇಷ್ಟಾದರೂ ದೇವಾಸುರರ ಯುದ್ಧ ನಿಲ್ಲಲೇ ಇಲ್ಲ.

ಇನ್ನೊಂದು ಸಲ ಬಲಿಯು ಇಂದ್ರನೊಡನೆ ಯುದ್ಧಕ್ಕೆ ನಿಲ್ಲಬೇಕಾಯಿತು. ಯುದ್ಧವು ಬಹು ಬಿರುಸಿನಿಂದ ನಡೆಯಿತು. ಇದೊಂದು ಮಹಾಯುದ್ಧ. ಕೊನೆಗೆ ಇಂದ್ರನು ಕೋಪಗೊಂಡು, ತನ್ನ ವಜ್ರಾಯುಧದಿಂದ ಬಲಿಯನ್ನು ಕೊಲ್ಲಬೇಕೆಂದು ಅದನ್ನು ಮೇಲಕ್ಕೆತ್ತಿದನು. ಆಗ "ಇಂದ್ರಾ! ತಪಸ್ಸು, ಧರ್ಮ, ಸತ್ಯ—ಮುಂತಾದ ಸದ್ಗುಣಗಳಿಗೆ ಬಲಿಯು ಒಡೆಯನಾಗಿದ್ದಾನೆ. ಅಜೇಯನೆಂದು ಬ್ರಹ್ಮನಿಂದ ವರ ಪಡೆದಿದ್ದಾನೆ. ಅವನನ್ನು ಸೋಲಿಸುವಂತಿಲ್ಲ" ಎಂದು ಅಶರೀರವಾಣಿ ಆಯಿತು. ಇದನ್ನು ಕೇಳಿ, ಇಂದ್ರನು ಯುದ್ಧಮಾಡದೆ ಓಡಿಬಿಟ್ಟನು. ದೈತ್ಯರು, ತಾವು ಜಯಶಾಲಿಗಳೆಂದು ಜಯಭೇರಿ ಹೊಡೆದರು.

ಬಲಿಯು ಹೀಗೆ ತನ್ನ ಪರಾಕ್ರಮದಿಂದ ಮೂರು ಲೋಕಕ್ಕೂ ಒಡೆಯನಾದನು. ಧರ್ಮದೇವತೆಯು ಅವನ ರಾಜ್ಯದಲ್ಲಿ ನಾಲ್ಕು ಕಾಲಿನಲ್ಲಿ ನಡೆದಳು. ಬಲಿಗೆ ದೇವರಾಜ ಪಟ್ಟಾಭಿಷೇಕವಾಯಿತು. ಅವನ ಸತ್ಯಸಂಧತೆಯನ್ನೂ, ಸಾಮರ್ಥ್ಯವನ್ನೂ ಕಂಡು ಲಕ್ಷ್ಮಿಯು ಅವನಿಗೊಲಿದಳು. ಇತರ ದೇವತೆಗಳೂ ಇವನಲ್ಲಿ ಪ್ರೀತರಾಗಿ ಇವನನ್ನು ಸೇವಿಸಿದರು. ಹೀಗೆ ಕೀರ್ತಿ, ನೀತಿ, ದಯಾ, ಮತಿ, ವಿದ್ಯಾ, ಶಾಂತಿ—ಇವರೆಲ್ಲಾ ಇವನಿಗೊಲಿದರು. ಕೊನೆಗೆ ಬಲಿಯು ಬ್ರಹ್ಮವಾದಿಯಾಗಿ, ಮೂರು ಲೋಕದ ಒಡೆಯನಾಗಿ, ರಾಜ್ಯಭಾರ ನಡೆಸುತ್ತಿದ್ದನು. ಹೀಗಿರುವಾಗ, ಅವನು ಒಂದು ದಿನ ತನ್ನ ಅಜ್ಜನಾದ ಪ್ರಹ್ಲಾದನ ಬಳಿಗೆ ಬಂದು ಕ್ಷತ್ರಿಯನಿಗೆ ಕ್ಷಮೆಯು ಉತ್ತಮವೇ ? ಅಥವಾ ಕೋಪವು ಉತ್ತಮವೇ ? ಎಂಬ ಸಂದೇಹವುಂಟಾಗಿದೆ ಇದನ್ನು ಪರಿಹರಿಸಬೇಕೆಂದು ಬೇಡಿದನು.

ತತ್ವಜ್ಞನಾದ ಪ್ರಹ್ಲಾದನು, ಬಲಿಗೆ ಈ ರೀತಿಯಾಗಿ ಹೇಳಿದನು. 'ಕೋಪವು ಯಾರಿಗೂ ಯಾವಾಗಲೂ ಒಳ್ಳೆಯದಲ್ಲ. ಹಾಗೆಯೇ ತಾಳ್ಮೆಯೂ ಕೂಡ ಯಾವಾಗಲೂ ಸರಿಯಾದುದಲ್ಲ. ಎಲ್ಲಾ ಕಾಲದಲ್ಲಿ ಒಂದೇ ಸಮನೆ ತಾಳ್ಮೆ ತೋರಿಸುವವರು, ಅನೇಕ ದೋಷಗಳಿಗೆ ಈಡಾಗುವರು. ಹೀಗೆ ಮಾಡುವವರನ್ನು ಶತ್ರುಗಳು ಅಲಕ್ಷ್ಯದಿಂದ ಕಾಣುವರು. ಸೇವಕರು ಅವಿಧೇಯರಾಗುವರು ಸದಾಕಾಲದಲ್ಲಿ ತಾಳ್ಮೆ ತೋರಿಸುವವನ ಧನವನ್ನು ಜನರು ಅಪಹರಿಸಲೆತ್ನಿಸುವರು. ಯಜಮಾನನಾದವನು, ಸೇವಕರನ್ನು

ಶಿಕ್ಷಿಸದೆ ತಪ್ಪನ್ನು ಮನ್ನಿಸಿ, ತಾಳ್ಮೆ ತೋರಿಸುತ್ತಲೇ ಬಂದರೆ, ಅವರು ಹದ್ದುಮೀರಿ ತಪ್ಪುಮಾಡುವರು. ಆದುದರಿಂದ ಸದಾಕಾಲದಲ್ಲಿ ತಾಳ್ಮೆ ತೋರಿಸುವುದು ಸರಿಯಲ್ಲ. ಲೋಕದಲ್ಲಿ ಜನರು ಸರ್ಪಗಳನ್ನು ಪೂಜಿಸುವರು. ಆದರೆ ಸರ್ಪಗಳನ್ನು ಕೊಲ್ಲತಕ್ಕ ಗರುಡನನ್ನು ಅಷ್ಟಾಗಿ ಪೂಜಿಸುವುದಿಲ್ಲ.

ಇದೇ ರೀತಿ ತಾಳ್ಮೆಬಿಟ್ಟು ಕೋಪತೋರಿಸುವವರು ದೋಷಯುಕ್ತ ರಾಗುವರು. ಅಂತಹವರಲ್ಲಿ ರಜೋಗುಣ ಹೆಚ್ಚುವುದು. ಅವರಲ್ಲಿ ವಿವೇಚನೆ ಮಾಯವಾಗುವುದು. ಸದಾ ಕೋಪವುಳ್ಳವನು, ಅವಮಾನ, ನಿಂದೆಗೆ ಗುರಿಯಾಗುವನು. ಐಶ್ವರ್ಯವನ್ನು ಕಳೆದುಕೊಳ್ಳುವನು. ಸಂತಾಪ, ದ್ವೇಷಕ್ಕೆ ಗುರಿಯಾಗುವನು. ಕೋಪದಿಂದ ಮೃದುತ್ವ ಹೋಗುವುದು. ವಿವೇಕ ಮಾಯವಾಗುವುದು. ಅವನು ಕ್ರೂರಿಯೂ, ಕಪಟಿಯೂ, ಪಾಪಿಯೂ ಆಗುವನು. ಆದುದರಿಂದ ಕ್ಷಮೆ, ಕೋಪ— ಇವುಗಳನ್ನು ಸಮಯೋಚಿತವಾಗಿ ಉಪಯೋಗಿಸಬೇಕು. ಎಲ್ಲಕ್ಕಿಂತ ಸಾಮೋಪಾಯವು ಸರ್ವಶ್ರೇಷ್ಠ. ಯಾರು ದೇಶ ಕಾಲವನ್ನು ನಿರೀಕ್ಷಿಸಿ ಸಮಯಕ್ಕೆ ತಕ್ಕಹಾಗೆ ಕೋಪ, ತಾಳ್ಮೆಯನ್ನು ಉಪಯೋಗಿಸುವರೋ ಅಂತಹವರು ವಿವೇಕಿಗಳಾಗಿ ರಾಜ್ಯವಾಳುವುದಕ್ಕೆ ಅರ್ಹರಾಗುವರು' ಎಂದು ಪ್ರಹ್ಲಾದನು ಹೇಳಿದನು.

ಹೀಗೆ ಬಲಿರಾಜನು ದಿನೇ ದಿನೇ ಪ್ರವರ್ಧಮಾನಕ್ಕೆ ಬರುತ್ತಿರುವು ದನ್ನು ಕಂಡು, ದೇವತೆಗಳು ಸಹಿಸದಾದರು. ಪರಾಜಿತನಾದ ಇಂದ್ರನು ಬ್ರಹ್ಮನಲ್ಲಿ ತನ್ನ ಕಷ್ಟವನ್ನು ಹೇಳಿಕೊಂಡನು. ಅವರೆಲ್ಲ ಒಟ್ಟಿಗೆ ಸೇರಿ, ವಿಷ್ಣುವಿನಲ್ಲಿಗೆ ಬಂದು ದುಷ್ಟನಿಗ್ರಹವಾಗಬೇಕೆಂದು ಬೇಡಿದರು. ಲೋಕಹಿತಾರ್ಥವಾಗಿ, ತಾನು ಅದಿತೀದೇವಿಯ ಗರ್ಭದಲ್ಲಿ ಅವತರಿಸು ವಂತೆ ವಿಷ್ಣುವು ಅಪ್ಪಣೆ ಇತ್ತನು. ಒಂದು ಸಾವಿರ ವರ್ಷವಾದ ಮೇಲೆ, ಸೂರ್ಯಕಾಂತಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ ಒಂದು ಮಗುವು ಅದಿತಿಯ ಗರ್ಭದಲ್ಲಿ ಹುಟ್ಟಿತು. ಈ ಮಹಾಪುರುಷನನ್ನು ದೇವತೆಗಳು ಅನೇಕ ಹೆಸರಿನಿಂದ ಪೂಜಿಸಿದರು. ಇವನೇ ವಾಮನಮೂರ್ತಿ. ದೇವತೆ ಗಳಿಗುಂಟಾಗಿದ್ದ ಬಲಿಯ ಕಾಟವನ್ನು ತಪ್ಪಿಸುವುದಕ್ಕಾಗಿ ವಾಮನಾವತಾರ ವಾಯಿತು.

ಬಲಿಯು ಮೂರು ಲೋಕದ ಒಡೆಯನೆಂದೆನಿಸಿಕೊಂಡ ಮೇಲೆ, ಅಶ್ವಮೇಧಯಾಗ ಮಾಡಲು ಇಷ್ಟಪಟ್ಟನು. ದೇವಗುರುವಾದ ಬೃಹಸ್ಪತಿಯು, ವಾಮನ ವಟುವನ್ನು ಯಜ್ಞಕ್ಕೆ ಕರೆದುಕೊಂಡು ಬಂದನು. ಯಜ್ಞೋಪವೀತ, ಮೌಂಜಿ, ಅಜಿನ, ದಂಡ, ಛತ್ರಿ—ಮುಂತಾದ ಬ್ರಹ್ಮಚರ್ಯ ಕುರುಹುಗಳಿಂದ ಕೂಡಿದ ವಾಮನನನ್ನು ಕಂಡು ಬಲಿಗೆ ಆಶ್ಚರ್ಯವಾಯಿತು. ಯಜ್ಞವಿಧಾನದಲ್ಲಿ ವಾಮನನಿಗಿದ್ದ ಅಪರಿಮಿತ ಪಾಂಡಿತ್ಯವನ್ನು ನೋಡಿ ಬಲಿಗೆ ಅಪಾರ ಸಂತೋಷವಾಯಿತು. ವಟುವಿಗೆ ದೀರ್ಘದಂಡ ನಮಸ್ಕಾರಮಾಡಿ, ಯಜ್ಞವೇದಿಕೆಯನ್ನು ಅಲಂಕರಿಸ ಬೇಕೆಂದು ಬಲಿಯು ಬೇಡಿದನು. ಬಲೀಂದ್ರನ ಯಜ್ಞವೈಭವವನ್ನೂ, ಶ್ರದ್ಧೆ ಯನ್ನೂ ವಾಮನನು ಹೊಗಳಿದನು. ಬ್ರಹ್ಮ, ಇಂದ್ರ, ಯಮ, ವರುಣ— ಇವರ್ಯಾರೂ ಇಂತಹ ಯಜ್ಞವನ್ನು ಇಷ್ಟು ಉತ್ತಮ ರೀತಿಯಲ್ಲಿ ನಡೆಸಲಿಲ್ಲವೆಂದು ಹೇಳಿದನು. ಇದನ್ನು ಕೇಳಿ ರಾಕ್ಷಸರಾಜನಿಗೆ ಸಂತೋಷ ವಾಯಿತು. 'ಓ! ಬ್ರಾಹ್ಮಣಶ್ರೇಷ್ಠಾ! ವಾಮನಮೂರ್ತೀ!! ಯಾವ ಮಹಾನುಭಾವನ ಪುತ್ರ ನೀನು? ನಿನಗೆ ಬೇಕಾದುದನ್ನು ಕೇಳು, ಕೊಡು ವೆನು' ಎಂದನು ಬಲಿಚಕ್ರವರ್ತಿ.

'ದೈತ್ಯರಾಜಾ! ನಾನು ಬ್ರಾಹ್ಮಣ. ನನಗೆ ರಾಜ್ಯ ಬೇಡ. ವಾಹನ ಬೇಡ. ಹಣ ಬೇಡ. ನನ್ನ ಗುರುವು ಕೊಟ್ಟ ಧಾರಾಗ್ನಿಯನ್ನಿಡಲು ನನ್ನ ಹೆಜ್ಜೆಯಲ್ಲಿ ಮೂರು ಪಾದದಷ್ಟು ಭೂಮಿಕೊಟ್ಟರೆ ಸಾಕು' ಎಂದು ವಾಮನಮೂರ್ತಿ ಹೇಳಿದನು.

'ವಟುಶ್ರೇಷ್ಠಾ! ಮೂರು ಪಾದಗಳೇಕೆ ನೂರು ಪಾದದಷ್ಟು ಭೂಮಿ ಯನ್ನು ಕೇಳು ಕೊಡುವೆನು. ಜೀವನಕ್ಕೆ ಸಾಕಾಗುವಷ್ಟು ಭೂಮಿ ಯನ್ನಾದರೂ ತೆಗೆದುಕೋ' ಎಂದನು ಬಲಿರಾಜ.

'ಮಹಾರಾಜಾ! ನನಗೆ ಮೂರು ಹೆಜ್ಜೆ ಭೂಮಿಯೇ ಸಾಕು. ಅಷ್ಟೇ ನಾನು ಕೇಳಿದುದು. ಅಷ್ಟರಿಂದ ತೃಪ್ತಿಯಾಗದವನು, ಇಡೀ ಭೂಮಂಡಲವನ್ನೇ ಕೊಟ್ಟರೂ ತೃಪ್ತನಾಗುವುದಿಲ್ಲ. ತೃಪ್ತಿ ಎಂಬುದು ಒಂದು ದೊಡ್ಡ ಗುಣ. ಅದು ಒಂದು ಇದ್ದರೆ ಸಾಕು. ಮೂರು ಹೆಜ್ಜೆ ಭೂಮಿ ಇಂದಲೇ ನಾನು ತೃಪ್ತಿಪಡೆಯುವೆನು' ಎಂದನು ವಾಮನ ವಟು.

ಆಗ ದೈತ್ಯಗುರುವಾದ ಶುಕ್ರಾಚಾರ್ಯನು ಅಲ್ಲಿಯೇ ಇದ್ದನು. ಆ ಬ್ರಾಹ್ಮಣ ವಟುವು ಸಾಮಾನ್ಯನಲ್ಲವೆಂದೂ, ಮೂರು ಹೆಜ್ಜೆಯಿಂದ ಮೂರು ಲೋಕವನ್ನೇ ಅಳೆದುಬಿಟ್ಟು ತೊಂದರೆ ಕೊಡುವನೆಂದೂ, ಮೋಸ ಹೋಗಬೇಡವೆಂದೂ, ಬಲಿಗೆ ಎಚ್ಚರಿಕೆ ಕೊಟ್ಟನು. ಎಲ್ಲಿ ಪುನಃ ನರಸಿಂಹ ರೂಪಿಯಾಗಿ ಸ್ವಾಮಿ ಬಂದುಬಿಡುವನೋ ಎಂಬ ಭಯವು ಪ್ರಹ್ಲಾದನಿ ಗುಂಟಾಯಿತು. ಭೂಮಿಯನ್ನು ಕೊಡಬಾರದೆಂದು ಅವನೂ ವಿರೋಧಿ ಸುವನು.

ಆದರೆ ಬಲಿರಾಜನು ಕೊಟ್ಟಮಾತಿಗೆ ತಪ್ಪುವನೇ ? ಎಂದಿಗೂ ಇಲ್ಲ. ಒಂದು ಪಕ್ಷ ಆ ವಟುವು ಸಾಕ್ಷಾತ್ ವಿಷ್ಣುವೇ ಆಗಿದ್ದಲ್ಲಿ, ತನಗೆ ಅದಕ್ಕಿಂತ ಉತ್ತಮ ಪಾತ್ರ ಇನ್ನಾವುದು ತಾನೆ ಇದ್ದೀತು? ವಿಷ್ಣುವೇ ಪ್ರತ್ಯಕ್ಷವಾಗಿ ಭೂಮಿ ಕೇಳಿದರೆ, ಇಲ್ಲವೆನ್ನಲಾದೀತೇ ? ತನ್ನ ದಾನಕ್ಕೆ ಅವನಿಗಿಂತ ಉತ್ತಮನಾದ ಪುರುಷ ಇನ್ಯಾರಿದ್ದಾರೆ ? ಕೊಡುವೆನೆಂದು ಹೇಳಿದ ಮೇಲೆ ಅದರಂತೆ ನಡೆಯಲೇಬೇಕೆಂದು ಬಲಿಯು ನಿಶ್ಚಯ ಮಾಡಿದನು.

ಶುಕ್ರಾಚಾರ್ಯನು, ವಾಮನನು ವಿಷ್ಣುವಿನ ಅವತಾರವೆಂದೂ, ಅವನಿಗೆ ಮೂರು ಹೆಜ್ಜೆ ಭೂಮಿ ಕೊಟ್ಟಲ್ಲಿ ಬಲಿಯ ಇಡೀ ಸಾಮ್ರಾಜ್ಯವೇ ನಾಶವಾಗುವುದೆಂದೂ ಪುನಃ ಎಚ್ಚರಿಸುವನು. ಆದರೂ ಬಲಿಯ ಧೃಢ ಮನಸ್ಸು ಬದಲಾಯಿಸುವುದಿಲ್ಲ. ತನ್ನ ಸಾಮ್ರಾಜ್ಯ ಹೋದರೂ ಕೊಟ್ಟ ಭಾಷೆಗೆ ತಾನು ತಪ್ಪುವುದಿಲ್ಲವೆಂದು ಬಲಿಯು ಹೇಳುವನು. ದೈತ್ಯ ಗುರುವಿಗೆ ಕೋಪ ಬಂದು, 'ನಿನ್ನ ಶ್ರೀ ಹೋಗಲಿ' ಎಂದು ಬಲಿಯನ್ನು ಶಪಿಸುವನು. ಬಲಿರಾಜನ ಹೆಂಡತಿ ಸಂಧ್ಯಾವಳಿಯು ಕಲಶದಿಂದ ನೀರು ತಂದು ವಾಮನ ವಟುವಿಗೆ ಮೂರು ಹೆಜ್ಜೆ ಭೂಮಿಯನ್ನು ದಾನಮಾಡಲು ಧಾರೆ ಎರೆಯುವಳು. ದೇವತೆಗಳಿಗೆಲ್ಲಾ ಸಂತೋಷವಾಗುವುದು ಬಲಿರಾಜನ ಮೇಲೆ ಪುಷ್ಪವೃಷ್ಟಿ ಕರೆಯುವರು.

ದೈತ್ಯರಾಜನು ಧಾರೆ ಎರೆದು ಕೊಟ್ಟಕೂಡಲೆ ವಾಮನಮೂರ್ತಿಯು ಅದ್ಭುತಾಕಾರವಾಗಿ ಬೆಳೆದನು. ಇದೇ ತ್ರಿವಿಕ್ರಮಾವತಾರ. ಇದೊಂದು ದೊಡ್ಡ ಆಕಾರ. ಸೂರ್ಯಚಂದ್ರರೇ ಅದರ ಕಣ್ಣು. ನಾಭಿಯೇ ಸ್ವರ್ಗದ

ಬಾಗಿಲು. ಸಮಸ್ತ ಬ್ರಂಹಾಂಡವೇ ಅದರಲ್ಲಿ ಐಕ್ಯವಾಗಿದೆ. ಆ ಮಹಾ ಮೂರ್ತಿಯು ಒಂದು ಪಾದದಲ್ಲಿ ಇಡೀ ಭೂಮಂಡಲವನ್ನು ಅಳೆದನು. ಇಡೀ ಆಕಾಶವನ್ನೆಲ್ಲಾ ಇನ್ನೊಂದು ಪಾದದಲ್ಲಿ ಅಳೆದನು. ಹೀಗೆ ಬೆಳೆದ ಪಾದವು ಸತ್ಯಲೋಕದವರೆಗೆ ವ್ಯಾಪಿಸಿತು. ಬ್ರಹ್ಮನು ಆ ಪಾದಕ್ಕೆ ಅಭಿಷೇಕ ಮಾಡಿದನು. ಅದರಿಂದ ಗಂಗೆ ಹುಟ್ಟಿದಳು. ಮೂರನೆಯ ಪಾದಕ್ಕೆ ಸ್ಥಳವಿಲ್ಲವಾಯಿತು. ಬಲಿರಾಜನ ಭಾಷೆ ನೆರವೇರಲಿಲ್ಲ. 'ಬಲಿರಾಜಾ! ಸೂರ್ಯನ ಬೆಳಕು ಪ್ರಕಾಶಿಸುವವರೆಗೂ, ಚಂದ್ರ ನಕ್ಷತ್ರರು ಕಾಣುವವರೆಗೂ, ಮೋಡಗಳು ಮಳೆ ಕರೆಯುವವರೆಗೂ, ವಿಸ್ತಾರವಾಗಿದ್ದ ಪ್ರದೇಶವೆಲ್ಲಾ ನನ್ನ ಎರಡು ಪಾದದಷ್ಟಾಯಿತು. ಮೂರ ನೆಯ ಪಾದಕ್ಕೆ ಸ್ಥಳವೆಲ್ಲಿ? ನಿನ್ನ ಮಾತು ನೆರವೇರಲಿಲ್ಲ. ಭಾಷೆ ತಪ್ಪಿದವನಿಗೆ ನರಕ ಸಿದ್ಧ. ನೀನು ಮಾತಿಗೆ ತಪ್ಪಿದುದರಿಂದ ನಾಗರು ನಿನ್ನನ್ನು ಬಂಧಿಸುವರು. ಏನು ಹೇಳುವೆ?' ಎಂದನು ತ್ರಿವಿಕ್ರಮನು.

ಆಗ ಬಲಿರಾಜನು 'ದಯಾನಿಧೇ! ನಾನು ನರಕಕ್ಕೆ ಹೆದರುವವನಲ್ಲ. ನಾಗಪಾಶಕ್ಕೂ ಭಯಪಡುವವನಲ್ಲ. ನನ್ನ ಭಾಷೆಯನ್ನು ಪೂರ್ಣಗೊಳಿಸು ವುದಕ್ಕೆ ಅಪ್ಪಣೆಕೊಡು. ನಿನ್ನ ಮೂರನೆಯ ಪಾದಕ್ಕೆ ಸ್ಥಳವು ನನ್ನ ತಲೆಯ ಮೇಲಿದೆ. ಅದನ್ನು ನನ್ನ ತಲೆಯಮೇಲಿಡು. ನಿನ್ನಂತಹ ಗುರುಶ್ರೇಷ್ಠನಿಂದ ಉಂಟಾಗುವ ಶಿಕ್ಷೆಯು ಅತ್ಯಂತ ಹರ್ಷದಾಯಕ ವಾದುದು' ಎಂದನು. ಇದನ್ನು ನೋಡಿ, ಪ್ರಹ್ಲಾದ, ಸಂಧ್ಯಾವಳಿ, ಬ್ರಹ್ಮನೇ ಮುಂತಾದವರಿಗೆ ಸಂತೋಷವಾಯಿತು. ಅವರೆಲ್ಲ ವಿಷ್ಣುವನ್ನು ಕುರಿತು ಸ್ತೋತ್ರ ಮಾಡಿದರು.

ತ್ರಿವಿಕ್ರಮಾವತಾರಿಯಾಗಿದ್ದ ವಾಮನನಿಗೆ ಅತ್ಯಂತ ಹರ್ಷ ವಾಯಿತು. ಬಲಿಯ ಭಕ್ತಿಗೆ ಮೆಚ್ಚಿದನು. 'ದೈತ್ಯರಾಜಾ! ಜಯಿಸಲು ಕಷ್ಟವಾದ ಮಾಯೆಯನ್ನು ನೀನು ಸುಲಭವಾಗಿ ಜಯಿಸಿದೆ. ನಿನ್ನ ಕೀರ್ತಿ ಜಗತ್ತಿಗೆಲ್ಲ ಹರಡಲಿ. ದೇವತೆಗಳಿಗೂ ದೊರಕದಂತಹ ಉತ್ತಮ ಜನ್ಮ ನಿನಗುಂಟಾಗಲಿ. ಇಂದ್ರನು ನನ್ನ ಸಹೋದರ. ಅವನ ತಂಟೆಗೆ ನೀನು ಹೋಗಬೇಡ. ಅವನು ದೇವತೆಗಳಿಗೆಲ್ಲ ರಾಜ. ಅವನನ್ನು ನೀನು ಗೌರವದಿಂದ ಕಾಣು. ನಿನ್ನ ಈ ಮಹಾದಾನಕ್ಕಾಗಿ ನಾನು ಸಂತೋಷ

ಪಟ್ಟಿನು. ಭೂಮಂಡಲ ಇರುವವರೆಗೆ ನಿನ್ನ ಹೆಸರು ಶಾಶ್ವತವಾಗಿ ನಿಲ್ಲಲಿ. ವಿಶ್ವಕರ್ಮನಿಂದ ನಿರ್ಮಿತವಾದ ಅರಮನೆಯೊಂದು ಪಾತಾಳಲೋಕದಲ್ಲಿ ಸಿದ್ಧವಾಗಿದೆ, ನೀನು ಅಲ್ಲಿದ್ದು ಶಾಶ್ವತವಾದ ಸುಖವನ್ನು ಅನುಭವಿಸು. ನಿನಗೆ ಯಾವ ಕಷ್ಟಗಳೂ ಬಾರದಿರಲಿ. ನಿನ್ನ ಭಕ್ತಿಗೆ ಮೆಚ್ಚಿದೆ. ನೀನು ಸ್ಥಿರಜೀವಿಯಾಗಿರು. ನಿನಗೆ ಬೇಕಾದ ವರವನ್ನು ಕೇಳು' ಎಂದು ವಾಮನಮೂರ್ತಿ ಅಪ್ಪಣೆ ಇತ್ತನು.

ಆಗ ಬಲಿರಾಜನು ಹರ್ಷದಿಂದ ದಯಾನಿಧಿಯೂ ಪರಮಪೂಜ್ಯನೂ ಆದ ತಾನೇ ಪ್ರತ್ಯಕ್ಷವಾಗಿ ಬಂದು ದರ್ಶನ ಕೊಟ್ಟಮೇಲೆ, ತನಗಿನ್ನೇನೂ ಬೇಡವೆಂದೂ, ಆದರೆ ಸದಾ ತನ್ನ ಸಾನಿಧ್ಯವಿರುವಂತೆ ಕರುಣಿಸಬೇಕೆಂದೂ ಬೇಡುವನು.

ಬಲಿಯು ರಾಕ್ಷಸಕುಲದಲ್ಲಿ ಹುಟ್ಟಿದ್ದರೂ ಕೂಡ, ಅವನು ಪರಮ ಭಕ್ತ, ದಾನಶೀಲ, ಸದ್ಗುಣಭರಿತ, ಆಸ್ತಿಕ ಶಿರೋಮಣಿ. ಅವನ ಭಕ್ತಿಗೆ ಮೆಚ್ಚಿ ವಿಷ್ಣುವು ತನ್ನ ನಿಜಸ್ವರೂಪವನ್ನು ತೋರಿಸಿದನು. ಪಾತಾಳಲೋಕದಲ್ಲಿ ಬಲಿಯು ಇರುವ ಅರಮನೆಗುಲ್ಲಿ ತಾನು ಇರುವಂತೆ ಹೇಳಿದನು. ಹೀಗೆ ಪಾತಾಳಲೋಕದಲ್ಲಿ ಬಲಿಯನ್ನು ಇಡುವುದರಿಂದ, ದೇವತೆಗಳಿಗೆ ಶತ್ರುಭಯವಿಲ್ಲವಾಯಿತು. ಬಲಿಯು ಹೊರಗೆ ಬಾರದಂತೆ ಕಾಯ್ದಂತಾಯಿತು. ಬಲಿಗೆ ಬಂಧನವಿದ್ದರೂ, ತಾನು ಬಂಧನದಲ್ಲಿರುವೆನೆಂಬ ಭಾವನೆ ಮಾಯವಾಯಿತು. ಹೀಗೆ ಪರಮಾತ್ಮನ ಒಂದು ಉಪಾಯದಿಂದ ಹಲವಾರು ಉತ್ತಮಕಾರ್ಯಗಳನ್ನು ಸಾಧಿಸಿದಂತಾಯಿತು.

ಬಲಿಯು ಭೂಮಂಡಲವನ್ನು ಬಿಟ್ಟು ಪಾತಾಳದಲ್ಲಿದ್ದರೂ ಅವನ ಹೆಸರು ಭೂಲೋಕದಲ್ಲಿ ಶಾಶ್ವತವಾಗಿ ಜನರ ನೆನಪಿಗೆ ಬರುವಂತೆ ಪರಮಾತ್ಮ ಮಾಡಿದ್ದಾನೆ. ಪ್ರತಿವರ್ಷವೂ ಕಾರ್ತೀಕ ಶುದ್ಧ ಪಾಡ್ಯಮಿಗೆ ಬಲಿಪಾಡ್ಯಮಿ ಎಂದು ಹೆಸರು ಬಂದಿದೆ ಅಂದು ಬಲಿಯು ಪಾತಾಳದಿಂದ ಭೂಲೋಕಕ್ಕೆ ಬಂದು, ಜನರು ಮಾಡುವ ಬಲಿಪೂಜೆಯನ್ನು ಕೈಗೊಳ್ಳುವಂತೆ ದೇವರು ಅವನಿಗೆ ಅಪ್ಪಣೆ ಇತ್ತಿದ್ದಾನೆಂಬ ನಂಬಿಕೆ ಜನರಲ್ಲುಂಟಾಗಿದೆ ಬಲಿಪಾಡ್ಯಮಿ ದಿನಸ ಬಲೀಂದ್ರನ ಪೂಜೆ ಇಂದೂ ನಡೆಯುತ್ತಿದೆ. ಭೂಲೋಕ ಇರುವವರೆಗೆ ಕೂಡ ನಡೆಯುಬಹುದು.

ಮೂರು ಹೆಜ್ಜೆ ಭೂಮಿಯನ್ನು ಕೇಳಿ, ಮೂರು ಲೋಕವನ್ನೇ ಆಕ್ರಮಿಸಿ, ದಾನಕೊಟ್ಟ ಬಲಿಯನ್ನು ಪಾತಾಳಕ್ಕೆ ತುಳಿದುದು ಸರಿಯೇ ? ಈ ಪ್ರಶ್ನೆ ಸಾಮಾನ್ಯ ಮಾನವರಿಗೆ ಸರಿತೋರದಿರಬಹುದಲ್ಲವೇ ?

ವಾಮನವಟು ಯಾರು ಎಂಬುದನ್ನು ಶುಕ್ರಾಚಾರ್ಯನು ತಿಳಿಸಿದನು. ತಾತ ಪ್ರಹ್ಲಾದ ಕೂಡ ಬಲಿಗೆ ಹೇಳಿದ. ಆದರೂ ಬಲಿಯು ಅದನ್ನು ಲಕ್ಷಿಸುವದಿಲ್ಲ. ಶ್ರೀಮನ್ನಾರಾಯಣನೇ ಆ ರೂಪದಲ್ಲಿ ಬಂದಿದ್ದರೆ, ಅದಕ್ಕಿಂತ ಹೆಚ್ಚಿನದಿನ್ನೇನುತಾನೆ ಅವನಿಗೆ ಬೇಕು? ಪರಮಾತ್ಮನೇ ವಟುವಾಗಿ, ಉತ್ತಮ ಬ್ರಾಹ್ಮಣನಾಗಿ, ಯಜ್ಞದೀಕ್ಷೆಯಲ್ಲಿರುವಾಗ ದಾನಕೇಳುವುದು ಸರ್ವೋತ್ತಮ ಸಂದರ್ಭ. ಅಂತಹ ಅವಕಾಶ ಎಲ್ಲರಿಗೂ ದೊರಕುವುದಿಲ್ಲ. ದಾನಶೀಲನೂ, ನೀತಿವಂತನೂ, ದೈವಭಕ್ತನೂ ಆದ ಬಲಿಯು, ಅಂತಹ ಅವಕಾಶವನ್ನು ತಿರಸ್ಕರಿಸಿಯಾನೇ? ಭಗವಂತನೇ ಸ್ವತಃ ಬಂದು ಬಂಧುವೂ, ಸ್ನೇಹಿತನೂ, ಅನುಗ್ರಾಹಕನೂ ಆಗುವೆನೆಂದು ಬಲಿಗೆ ಹೇಳಿದರೆ, ಬಲಿಯು ಬೇಡವೆಂದು ಹೇಳಿಯಾನೇ ? ಎಂದಿಗೂ ಇಲ್ಲ. ಪರಮಾತ್ಮನ ಪ್ರಭಾವವನ್ನು ತಿಳಿಯುವವನೇ ಪರಮ ಭಾಗ್ಯಶಾಲಿ. ಅವನ ಆಧೀನದಲ್ಲಿರಲು ಯಾರು ಬಯಸುವರೋ, ಅವರು ಅತ್ಯಂತ ಪುಣ್ಯಶಾಲಿಗಳು. ಪರಮಾತ್ಮನ ಸೇವೆಯಿಂದ, ದರ್ಶನದಿಂದ, ಪೂಜೆಯಿಂದ, ಪ್ರಾರ್ಥನೆಯಿಂದ, ಸುಖವುಂಟೆಂದು ಯಾರು ತಿಳಿಯುವರೋ ಅವರಿಗೆ ಆನಂದವಾಗುವುದು. ಬಲಿರಾಜನಿಗೂ ಹಾಗೆಯೇ ಆಯಿತು. ಪರಮಾತ್ಮನು ಬಲಿಯ ಹೃದಯದಲ್ಲಿ ನೆಲೆಸಿದನು. ಪಾತಾಳದಲ್ಲಿರುವಾಗ, ಅವನ ಅರಮನೆಯ ಕಾವಲಿಗಾಗಿ ತಾನಿರುವೆನೆಂದು ರಕ್ಷಣೆ ನೀಡಿದನು. ಇದಕ್ಕಿಂತ ಹೆಚ್ಚಿನ ಭಾಗ್ಯ ಇನ್ನಾವುದೂ ಇಲ್ಲ.

ಪರಮಾತ್ಮನ ಇಷ್ಟದಂತೆ ಬಲಿಯು ತನ್ನ ಪರಿವಾರಸಮೇತ ಪಾತಾಳವನ್ನು ಸೇರಿದನು. ಬಹುಕಾಲ ಕಳೆಯಿತು. ಹೀಗಿರುವಾಗ ಒಂದು ದಿನ ಲಂಕಾಧಿಪತಿಯಾದ ರಾವಣನು ಯುದ್ಧಮಾಡಬೇಕೆಂಬ ಆಸೆಯಿಂದ ಅಲ್ಲಿಗೆ ಬಂದನು. ಬಲಿರಾಜನಿದ್ದ ಸೊಗಸಾದ ಅರಮನೆಯನ್ನು ನೋಡಿದನು. ಅದರಲ್ಲಿ ಪ್ರವೇಶಮಾಡಿ ಒಂದಾದ ಮೇಲೆ ಇನ್ನೊಂದರಂತೆ ಏಳು

ತೊಟ್ಟಿಗಳನ್ನು ದಾಟಿ ಮುಂದೆ ನಡೆದನು. ಅಲ್ಲಿ ದೊಡ್ಡ ಅಗ್ನಿವೇದಿಕೆಯೊಂದಿತ್ತು. ಅದರ ಮುಂದೆ ಸೂರ್ಯನಂತೆ ಪ್ರಕಾಶಮಾನವಾಗಿ ಹೊಳೆಯುತ್ತಿದ್ದ ದಿವ್ಯ ಪುರುಷನೊಬ್ಬನು ಕುಳಿತಿದ್ದನು. ಅವನಿಗೆ ಉಬ್ಬಿದ ಮೈ, ಅಗ್ನಿಜ್ವಾಲೆಯಂತೆ ನೀಡಿದ ನಾಲಿಗೆ, ಕೆಂಪಾದ ಕಣ್ಣು ಹೊಳೆಯುವ ಮೀಸೆ, ತೊಂಡೆಹಣ್ಣಿನಂತಹ ತುಟಿ, ಕೋರೆದಾಡೆ, ಶಂಖದಂತಹ ಕೊರಳು, ಬಿಳುಪಾದ ಮುಖ, ಕೈಯಲ್ಲಿ ದೊಡ್ಡ ಒನಕೆ, ಇಂತಹ ದೊಡ್ಡ ಪುರುಷಾಕೃತಿಯೊಂದು ರಾವಣನಿಗಡ್ಡಲಾಗಿ ಬಂದು ನಿಂತಿತು. ಇದನ್ನು ನೋಡಿ ರಾವಣನಿಗೆ ಭಯವಾಯಿತು. ಆದರೆ ಅದನ್ನು ತೋರಗೊಡಲಿಲ್ಲ. ಅಪಶಕುನವಾದಂತಾಯಿತು. ಹಾಗೆಯೇ ಚಿಂತಿಸುತ್ತ ನಿಂತನು.

'ರಾಕ್ಷಸರಾಜಾ! ಏಕೆ ಚಿಂತಿಸುತ್ತಿರುವೆ? ಭಯವಾಯಿತೇ ನಿನಗೆ? ಯುದ್ಧಮಾಡಲು ಆಸೆಪಟ್ಟು ಬಂದವನಲ್ಲವೇ ನೀನು? ಬಾ. ನನ್ನೊಡನೆ ಯುದ್ಧಮಾಡು. ನನ್ನನ್ನು ಜಯಿಸಿದಮೇಲೆ ನನಗಿಂತ ಬಲವಾದವನು ಇನ್ನೊಬ್ಬನಿದ್ದಾನೆ ಇಲ್ಲಿ. ಆಮೇಲೆ, ನೀನು ಅವನೊಡನೆ ಯುದ್ಧಮಾಡಬಹುದು. ಏಳು ನಿನ್ನ ಇಷ್ಟಬಂದಂತೆ ಮಾಡು.' ಎಂದನು ಆ ಮಹಾಪುರುಷ.

ರಾವಣನಿಗೆ ಈ ಮಾತುಗಳನ್ನು ಕೇಳಿ ಇನ್ನೂ ಭಯವಾಯಿತು. ಆದರೂ ಧೈರ್ಯ ತಂದುಕೊಂಡು, 'ಎಲೈ! ಪುರುಷನೆ! ಈ ಮನೆಯಲ್ಲಿರುವವರಾರು? ಇದರ ಯಜಮಾನನನ್ನು ತೋರಿಸು. ಆತನೊಡನೆ ಯುದ್ಧಮಾಡುವೆನು' ಎಂದನು ರಾವಣ.

'ಎಲೈ, ಲಂಕಾಧಿಪತಿಯೇ? ಇಲ್ಲೊಬ್ಬ ದೈತ್ಯರಾಜನಿದ್ದಾನೆ. ಅವನು ಮಹಾ ಪರಾಕ್ರಮಿ, ಸತ್ಯವಂತ, ಧರ್ಮಿಷ್ಠ, ಸೂರ್ಯನಂತೆ ತೇಜಸ್ಸುಳ್ಳವನು. ಯಮನಂತೆ ಭಯಂಕರ, ಪ್ರಿಯವಾಗಿ ನುಡಿಯುವುದು ಅವನ ಸ್ವಭಾವ. ಗುರುಹಿರಿಯರಿಗೆ ಅತ್ಯಂತ ಪ್ರಿಯನು. ವೇದಾಧ್ಯಯನ ಸಂಪನ್ನ. ಮೇಘದಂತೆ ಘರ್ಜಿಸುವನು. ವಾಯುವಿನಂತೆ ಬೀಸುವನು. ಅಗ್ನಿಯಂತೆ ಜ್ವಲಿಸುವನು. ಅವನಿಗೆ ಯಾರಿಂದಲೂ, ಯಾವಾಗಲೂ ಭಯವಿಲ್ಲ. ಅವನೊಡನೆಯೇ ಯುದ್ಧಮಾಡಬೇಕೆಂಬ ಆಸೆ ಇದ್ದರೆ, ಒಳಗೆ ಹೋಗು.' ಎಂದು ಹೇಳಿ ಆ ಪುರುಷನು ಮಾಯವಾದನು.

ರಾವಣನು ಅವನ ಮಾತಿನಂತೆ ಮುಂದೆ ಹೋದನು. ಅಲ್ಲಿ ವಿಶ್ವ ರೂಪಿ ವಿಷ್ಣುವಿನಂತೆಯೇ ದೊಡ್ಡ ಆಕಾರವುಳ್ಳ ಬಲಿರಾಜನನ್ನು ಕಂಡನು. ಅವನ ಹತ್ತಿರ ಬಂದನು. ಆಗ ಬಲಿಯು 'ಕುಮಾರಾ! ದಶಗ್ರೀವಾ! ಮಗೂ, ಬಾ!' ಎಂದು ಕರೆದು ರಾವಣನನ್ನು ತೊಡೆಯ ಮೇಲೆ ಕುಳ್ಳಿರಿಸಿ ಕೊಂಡನು. ಏತಕ್ಕಾಗಿ ಬಂದೆ ಎಂದು ಕೇಳಿದನು. ಆಗ ರಾವಣನು ವಿಷ್ಣುವಿನ ಬಂಧನದಿಂದ ಅವನನ್ನು ಬಿಡಿಸಲು ಬಂದಿರುವುದಾಗಿ ತಿಳಿಸಿದನು.

'ರಾವಣಾ! ಯಾರು ನನ್ನನ್ನು ಬಂಧನದಲ್ಲಿಟ್ಟಿದ್ದಾನೆಂದು ನೀನು ತಿಳಿದಿರುವೆಯೋ ಆ ಪುರುಷನನ್ನೇ ನೀನು ನೋಡಿದುದು. ಆ ಮಹಾ ಪುರುಷನೇ ನನ್ನ ಅರಮನೆಗೆ ರಕ್ಷಕನಾಗಿದ್ದಾನೆ. ಎಷ್ಟೋ ಜನರು ಅವನಿಂದ ಪರಾಜಿತರಾಗಿ ಅವನ ಅಧೀನದಲ್ಲಿರುವರು. ನಮ್ಮ ಹಿರಿಯರು, ಅವರ ಪೂರ್ವಿಕರು, ಎಲ್ಲರನ್ನೂ ಅವನು ಕೊಂದನು. ಅವನು ಅಜೇಯನು. ಎಲ್ಲ ಕಾಲಗಳಲ್ಲಿ, ಎಲ್ಲ ವಿಷಯಗಳನ್ನೂ ನಿಶ್ಚಯಮಾಡುವವನು ಅವನೇ. ಅವನ ನಿಜತ್ವವನ್ನು ನೀನು ಕಾಣಲಾರೆ, ನಾನೂ ಕಾಣಲಾರೆ. ಇಡೀ ಜಗತ್ತನ್ನು ಪೋಷಿಸುವವನು, ಸೃಷ್ಟಿಮಾಡುವವನು, ನಾಶಮಾಡುವವನು ಅವನೇ. ಸಮಸ್ತಕ್ಕೂ ಅವನೇ ಕಾರಣ. ಯಜ್ಞ, ಹವನ, ಹೋಮ ಎಲ್ಲವೂ ಅವನೇ.

'ಪುಲಸ್ತ್ಯ ಕುಮಾರಾ! ಪಶುವನ್ನು ಮೂಗುದಾರ ಹಾಕಿ ಎಳೆಯು ವಂತೆ, ಅವನು ಇಡೀ ಪ್ರಪಂಚವನ್ನು ತನ್ನಿಷ್ಟದಂತೆ ಆಡಿಸುವನು. ಜಗತ್ತಿನಲ್ಲಿ ಹೆಸರುವಾಸಿಗಳಾದ, ಧನು, ಶುಂಭ, ದಂಭ, ಕಾಲನೇಮಿ, ಹಿರಣ್ಯಾಕ್ಷ, ಹಿರಣ್ಯಕಶಿಪು, ಮಧುಕೈಟಭ ಮುಂತಾದ ಎಷ್ಟೋ ಮಂದಿ ರಾಕ್ಷಸರು ಪರಾಕ್ರಮಿಗಳಾಗಿರಲಿಲ್ಲವೇ? ಅವರೆಲ್ಲ ಸೂರ್ಯರಂತೆ ತಪಿಸ ಲಿಲ್ಲವೇ? ಅಗ್ನಿಯಂತೆ ಪ್ರಕಾಶಿಸಲಿಲ್ಲವೇ? ವೇದಾಧ್ಯಯನ ಸಂಪನ್ನರಾಗಿರ ಲಿಲ್ಲವೇ? ಇಂದ್ರಪದವಿಯನ್ನೇ ಅಪೇಕ್ಷಿಸಿದವರಲ್ಲವೇ? ಅವರನ್ನೆಲ್ಲಾ ವಿಷ್ಣುವು ಕೊಂದುಬಿಟ್ಟನು. ಯಾರು ಯಾರನ್ನು ಹೇಗೆ ಹೇಗೆ ಅಡಗಿಸಿಟ್ಟಿರ ಬೇಕೆಂಬುದನ್ನು ಅವನ ಹಾಗೆ ಇನ್ಯಾರೂ ತಿಳಿದಿಲ್ಲ. ಯಾರನ್ನು, ಯಾವ ಕಾಲದಲ್ಲಿ, ಯಾವರೀತಿ ಕೊಲ್ಲಬೇಕು ಎಂಬುದನ್ನು ಅವನು ನಿರ್ಧರಮಾಡು ವನು. ಅದಕ್ಕೆ ಸರಿಯಾದ ರೂಪದಿಂದಲೇ ಅವನು ಅವತಾರಮಾಡುವನು.

'ರಾವಣಾ! ನೀನು ವೀರನೆಂದು ತಿಳಿದುಕೊಂಡಿರುವೆ. ಯುದ್ಧ ಮಾಡಬೇಕೆಂಬ ಆಸೆ ಬೇರೆ ನಿನಗೆ. ಅಗೋ ನೋಡು, ಅಲ್ಲಿ ಅಗ್ನಿಯಂತೆ ಪ್ರಕಾಶಿಸುವ, ಚಕ್ರಾಕಾರವಾಗಿ ಕಾಣುತ್ತಿರುವ ಪದಾರ್ಥವನ್ನು ಎತ್ತಿ, ನನ್ನ ಹತ್ತಿರ ತಂದಿಡು. ಆ ಮೇಲೆ ಇಷ್ಟವಿದ್ದರೆ ಯುದ್ಧ ಮಾಡುವಿಯಂತೆ' ಎಂದನು ಬಲಿರಾಜ.

ರಾವಣರಾಜನು, ಮುಗುಳುನಗೆಯಿಂದ ಆ ಚಕ್ರಾಕಾರದ ಕುಂಡಲದ ಬಳಿಗೆ ಬಂದು, ತನ್ನ ಎಡಗೈಯನ್ನು ಅದರ ಮೇಲಿಟ್ಟನು. ಅಲಕ್ಷ್ಯ ದಿಂದ ಮೇಲಕ್ಕೆತ್ತಲು ಪ್ರಯತ್ನಮಾಡಿದನು. ಎತ್ತುವುದಂತಿರಲಿ, ಅದನ್ನು ಅಲುಗಿಸುವುದಕ್ಕೂ ಅವನಿಂದಾಗಲಿಲ್ಲ. ಬಲಗೈಯಿಂದ ಹಿಡಿದು ಜಗ್ಗಿಸಿ ದನು. ಅದು ಅಲ್ಲಾಡಲಿಲ್ಲ. ಅನಂತರ, ತನ್ನ ಎರಡು ಕೈಗಳಿಂದ ಬಲ ವಾಗಿ ಹಿಡಿದು, ತನ್ನ ಶಕ್ತಿಯನ್ನೆಲ್ಲಾ ಪ್ರಯೋಗಿಸಿ, ಎತ್ತಲು ಪ್ರಯತ್ನಿ ಸಿದನು. ಹಾಗೆ ಎತ್ತುತ್ತಿರುವಾಗ, ಕೈಲಾಗದೆ, ಬುಡ ಕಡಿದ ಮರದಂತೆ ಕೆಳಗೆ ಬಿದ್ದುಬಿಟ್ಟನು. ಕೂಡಲೇ ಮೂರ್ಛೆ ಹೋದನು. ಮೈಯೆಲ್ಲಾ ರಕ್ತಮಯವಾಯಿತು. ಸ್ವಲ್ಪ ಹೊತ್ತಿನಲ್ಲಿ ಎಚ್ಚೆತ್ತು ಕುಳಿತನು. ಆಗ ಬಲಿರಾಜನು ಅವನನ್ನು ಹತ್ತಿರ ಕರೆದು ಸಮಾಧಾನಮಾಡಿ, 'ರಾವಣಾ! ನೀನು ಎತ್ತಲಾರದೆ ಬಿಟ್ಟ ಆ ಪದಾರ್ಥವು, ನಮ್ಮ ಮುತ್ತಾತ ಹಿರಣ್ಯಾಕ್ಷನ ಕರ್ಣಕುಂಡಲ. ಅವನ ತಮ್ಮ ಹಿರಣ್ಯಕಶಿಪುವೂ ಕೂಡ ಮಹಾ ಶೂರ. ಅವನಿಗೆ ರೋಗಭಯವಿರಲಿಲ್ಲ. ಅವನಿಗೆ ಶಸ್ತ್ರದಿಂದಾಗಲಿ, ಹಸಿಯ ಅಥವಾ ಒಣಗಿದ ಪದಾರ್ಥದಿಂದಾಗಲಿ, ಸಾಯುವಂತಿರಲಿಲ್ಲ. ರಾತ್ರಿಯಲ್ಲಾಗಲಿ, ಹಗಲಿನಲ್ಲಾಗಲಿ ಮರಣದ ಭಯವಿರಲಿಲ್ಲ. ಅಂತಹ ವರವನ್ನು ಅವನು ಬ್ರಹ್ಮನಿಂದ ಪಡೆದಿದ್ದ. ತನ್ನ ಮಗನಾದ ಪ್ರಹ್ಲಾದ ನೊಡನೆ ವಾದ ಮಾಡುತ್ತಿದ್ದಾಗ, ಮಹಾ ವಿಷ್ಣುವು ನರಸಿಂಹರೂಪಿಯಾಗಿ ಬಂದು, ತನ್ನ ಉಗುರಿನಿಂದ ಅವನ ಕರುಳನ್ನು ಬಗೆದು ಯಮಪುರಿಗೆ ಕಳುಹಿಸಲಿಲ್ಲವೇ ? ಅಂತಹ ಅಪಾರಮಹಿಮನಾದ, ಪರಮಾತ್ಮನೇ ನನ್ನ ಅರಮನೆಯ ರಕ್ಷಕನಾಗಿದ್ದಾನೆ. ಇಂದ್ರಾದಿಗಳಿಗೂ ಕೂಡ ಇಂತಹ ಭಾಗ್ಯವಿಲ್ಲ. ಅವರಿಗೆಲ್ಲ ಅಧಿಪತಿಯಾದ ಆ ಮಹಾಮಹಿಮನೇ ಇಲ್ಲಿರುವಾಗ ನನಗೆಂತಹ ಬಂಧನ. ಇದಕ್ಕಿಂತ ಹೆಚ್ಚಿನದಿನ್ನೇನು ಬೇಕು' ಎಂದನು.

ಆಗ ರಾವಣನು ತಾನು ಯಮಪುರಿಗೆ ಹೋಗಿ ಯಮನನ್ನು ಎದುರಿಸಿ ಬಂದವನೆಂದೂ, ಅಂತಹ ಯಮನಿಗಿಂತ ಈ ಪುರುಷನು ಹೆಚ್ಚೇ ಎಂದು ಕೇಳಿದನು.

'ರಾವಣಾ ! ಇವನ ಮಹಿಮೆ ನಿನಗೆ ತಿಳಿಯದು. ಇವನು ಸಾಮಾನ್ಯ ನಲ್ಲ. ಸರ್ವವ್ಯಾಪಿ, ಪುರಾಣಪುರುಷೋತ್ತಮ. ಭಕ್ತರಿಗೆಲ್ಲಾ ಅತ್ಯಂತ ಪ್ರಿಯನಾದವನು. ಸಮಸ್ತದೇವತೆಗಳೂ, ಸಮಸ್ತಭೂತಗಳೂ, ಸಮಸ್ತ ಲೋಕಗಳೂ, ಸಮಸ್ತಜ್ಞಾನವೂ ಇವನೇ. ಇವನು ಸರ್ವರೂಪಿ, ಇದನ್ನು ತಿಳಿದವರು ಪುಣ್ಯಶಾಲಿಗಳು. ಅವನನ್ನು ನೋಡುವುದು ಬಹುಕಷ್ಟ. ನೋಡದಿದ್ದರೆ ಹೋಗಲಿ, ಸ್ಮರಿಸಿದರೆ ಸಾಕು. ಅವರ ಇಷ್ಟಾರ್ಥವೆಲ್ಲಾ ಕೈಗೂಡುವುದು' ಎಂದು ಬಲಿರಾಜನು ಉತ್ತರವಿತ್ತನು.

ಈ ಮಾತುಗಳನ್ನು ಕೇಳಿದ ತಕ್ಷಣ ರಾವಣನಿಗೆ ಕೋಪ ಬಂದಿತು. ಕೆಂಪೇರಿದ ಕಣ್ಣುಗಳಿಂದ, ಇವನನ್ನು ಈಗಲೇ ಕೊಂದುಬಿಡುವೆನೆಂದು ತನ್ನ ಗಧೆಯನ್ನು ಮೇಲಕ್ಕೆತ್ತಿ, ಬಾಗಿಲಕಡೆಗೆ ಓಡಿದನು. ರಾವಣನ ಹುಚ್ಚತನವನ್ನು ಕಂಡು ಬಲಿರಾಜನಿಗೆ ನಗು ಬಂತು. ಮುಂದೆ ಇವನನ್ನು ಕೊಲ್ಲಲು ತಾನು ಅವತಾರಮಾಡಬೇಕಾಗಿದೆ ಎಂದೂ, ಬ್ರಹ್ಮನ ಮಾತು ಗಳನ್ನು ಸುಳ್ಳಾಗದಂತೆ ಮಾಡುವುದು ತನ್ನ ಕರ್ತವ್ಯವೆಂದೂ ತಿಳಿದು, ಆ ಮಹಾಪುರುಷನು ರಾವಣನ ಕಣ್ಣಿಗೆ ಕಾಣಿಸದಂತೆ ಅದೃಶ್ಯನಾಗುವನು. ರಾವಣನು ಮಾತ್ರ ಯಾರನ್ನೂ ಕಾಣದೆ ತಾನೇ ಜಯಶಾಲಿ ಎಂದು ಕೂಗಿ ಕೊಳ್ಳುತ್ತಾ ಓಡಿಬಿಡುವನು.

ಭಗವಂತನ ಅನುಗ್ರಹವನ್ನು ಪಡೆದ ಬಲಿರಾಜನು ಭಾಗ್ಯಶಾಲಿ ಚಿರಂಜೀವಿ. ಪಾತಾಳದಲ್ಲಿ ಪರಿವಾರ ಸಮೇತನಾಗಿ ಸುಖವಾಗಿರುವನು. ಬಲಿಪಾಡ್ಯಮಿ ದಿವಸ ಬಲೀಂದ್ರನಾಗಿ ಭೂಮಂಡಲಕ್ಕೆ ಬಂದು ಜನರ ಪೂಜೆಯನ್ನು ಕೈಗೊಳ್ಳುವನು. ಬಲಿಯಂತೆ ಭಕ್ತಿಯನ್ನೂ, ಧರ್ಮ ಬುದ್ಧಿಯನ್ನೂ, ಎಲ್ಲರೂ ಪಡೆಯಬೇಕು. ಅದು ಎಲ್ಲರ ಪ್ರಾರ್ಥನೆ ಯಾಗಬೇಕು.

# ಪರಶುರಾಮ

ಭೃಗುವಂಶವು ಬಹು ಹೆಸರುವಾಸಿಯಾದ ಋಷಿಗಳ ಕುಲ. ಈ ಕುಲದವರೆಲ್ಲ ಮಹಾತಪಸ್ವಿಗಳು, ವೇದಾಧ್ಯಯನ ಸಂಪನ್ನರು. ಧನುರ್ವಿದ್ಯಾ ಪಾರಂಗತರು. ಇಂತಹ ಕುಲದಲ್ಲಿ ಜಮದಗ್ನಿ ಋಷಿಯು ಪ್ರಸಿದ್ಧನಾದವನು. ಇವನ ಮಗ ಪರಶುರಾಮನು. ಜಮದಗ್ನಿಯು ವಿದ್ಯಾ ಪಾರಂಗತನಾದ ಮೇಲೆ, ಪ್ರಸೇನಜಿತ್ ಮಹಾರಾಜನ ಮಗಳಾದ ರೇಣುಕಾ ದೇವಿಯನ್ನು ಲಗ್ನವಾದನು. ಈ ದಿವ್ಯ ದಂಪತಿಗಳಿಗೆ ರುಮನ್ವಾನ್, ಸುಷೇಣ, ವಸು, ವಿಶ್ವಾವಸು, ಪರಶುರಾಮನೆಂಬ ಐವರು ಮಕ್ಕಳಾದರು. ಎಲ್ಲರೂ ಸುಖವಾಗಿ ಗುರುಕುಲದಲ್ಲಿ ವಾಸವಾಗಿದ್ದರು.

ಒಂದು ದಿನ ಜಮದಗ್ನಿಯು ಕಾಡಿನಲ್ಲಿ ವಿಹಾರಕ್ಕಾಗಿ ಪತ್ನೀಸಮೇತನಾಗಿ ಹೋದನು. ಅಲ್ಲಿ ಒಂದಾದಮೇಲೆ ಇನ್ನೊಂದು ಬಾಣ ಬಿಡುತ್ತಿದ್ದನು. ಹಾಗೆ ಬಿಟ್ಟ ಬಾಣಗಳನ್ನು ರೇಣುಕಾದೇವಿಯು ಪತಿಗೆ ತಂದು ಕೊಡಬೇಕಾಗಿತ್ತು. ಜ್ಯೇಷ್ಠಮಾಸದ ಬಿಸಿಲು ಕಾಯುತ್ತಿತ್ತು. ಮೇಲೆ ಉರಿಯುವ ಶಾಖ, ಕೆಳಗೆ ಭೂಮಿಯು ಕಾದು ಹೋಗಿತ್ತು. ರೇಣುಕಾ ದೇವಿಯು ಮೊದಲು ಬೇಗ ಬೇಗನೆ ಬಾಣಗಳನ್ನು ತಂದುಕೊಡುತ್ತಿದ್ದಳು. ಎಷ್ಟು ಹೊತ್ತು ಹಾಗೆ ತಂದುಕೊಡಲು ಸಾಧ್ಯ ಅವಳಿಗೆ? ಆಯಾಸವಾಗಿ, ಹತ್ತಿರದ ಮರದ ನೆರಳಿನಲ್ಲಿ ನಿಂತು ದಣಿವಾರಿಸಿಕೊಂಡು, ಆಮೇಲೆ ಬಾಣ ತಂದುಕೊಡುತ್ತಿದ್ದಳು. ಪತ್ನಿಯ ಆಯಾಸವನ್ನು ಕಂಡು ಆ ಆಯಾಸಕ್ಕೆ ಕಾರಣನಾದ ಸೂರ್ಯನನ್ನು ಬಾಣದಿಂದ ಹೊಡೆಯಲು ಉದ್ಯುಕ್ತನಾದನು.

ಆಗ ಸೂರ್ಯನು ಬ್ರಾಹ್ಮಣನ ವೇಷದಲ್ಲಿ ಜಮದಗ್ನಿ ಋಷಿಯ ಬಳಿಗೆ ಬಂದು 'ಋಷಿವರ್ಯಾ! ಸೂರ್ಯನು ತನ್ನ ಕಿರಣದ ಶಾಖದಿಂದ ಭೂಮಿಯ ಮೇಲಿರುವ ನೀರಿನ ರಸವನ್ನು ಹೀರುವನು. ಆ ರಸವೇ ಮೋಡವಾಗುವುದು. ಮೋಡದಿಂದ ಮಳೆ ಬೀಳುವುದು. ಮಳೆ ಬಂದರೆ ತಾನೇ ಆಹಾರ, ದವಸ ಎಲ್ಲ ಸಿಗುವುದು? ಆಹಾರವಿಲ್ಲದಿದ್ದರೆ ಜೀವನ ಹೇಗೆ? ಹೀಗೆ ಜನರ ಜೀವನಕ್ಕೆ ಕಾರಣನಾದ ಸೂರ್ಯನನ್ನು ಕೆಳಗೆ

ಉರುಳಿಸುವುದು ಉಚಿತವೇ? ಸೂರ್ಯನು ಸದಾ ಚಲಿಸುತ್ತಿರುವನು. ಚಲಿಸುತ್ತಿರುವವನನ್ನು ನೀನು ಹೇಗೆ ಹೊಡೆಯುವೆ' ಎಂದನು.

'ಆರ್ಯ' ನೀನು ಯಾರೆಂಬುದನ್ನು ನಾನು ಬಲ್ಲೆ. ನೀನು ಚಲಿಸುತ್ತಿರುವೆ ನಿಜ. ಒಂದೇ ಕಡೆ ಬೇಕಾದರೂ ಇರಬಲ್ಲೆ. ಮಧ್ಯಾಹ್ನ ಅರ್ಧನಿಮಿಷ ನೀನು ನಿಂತಾಗ ನಿನ್ನನ್ನು ಹೊಡೆಯುವೆನು.' ಎಂದು ಜಮದಗ್ನಿ ಉತ್ತರವಿತ್ತನು.

ಹಾಗೆ ಮಾಡಬೇಡವೆಂದು ಸೂರ್ಯನು ಜಮದಗ್ನಿಗೆ ಹೇಳಿ, ಒಂದು ಜೊತೆ ಪಾದರಕ್ಷೆಯನ್ನೂ, ಒಂದು ಛತ್ರಿಯನ್ನೂ ಅವನಿಗೆ ಕೊಟ್ಟನು. ಅಂದಿನಿಂದ ಛತ್ರಿ, ಪಾದರಕ್ಷೆಗಳೆರಡೂ ಭೂಲೋಕದಲ್ಲಿ ಆಚರಣೆಗೆ ಬಂದುವು. ಇವುಗಳಿಂದ ಮೇಲಿನ ಮತ್ತು ಕೆಳಗಿನ ತಾಪದಿಂದ ರಕ್ಷಣೆ ಪಡೆಯುವಂತಾಯಿತು. ವೇದಾಧ್ಯಯನಸಂಪನ್ನರಾದ ಸ್ನಾತಕರಿಗೆ, ಇವನ್ನು ಕೊಟ್ಟರೆ ಪುಣ್ಯ ಬರುವುದಂತೆ. ಅಂತಹ ಜಮದಗ್ನಿಋಷಿಯ ಮಗನೇ ಪರಶುರಾಮ. ಇವನು ವಿಷ್ಣುವಿನ ಅವತಾರ.

ಪರಶುರಾಮನು ಹುಟ್ಟಿದಾಗ ಹೈಹಯರೆಂಬ ಕ್ಷತ್ರಿಯರು ರಾಜ್ಯ ಭಾರಮಾಡುತ್ತಿದ್ದರು. ಅವರಲ್ಲಿ ಕಾರ್ತವೀರ್ಯಾರ್ಜುನನು ಹೆಸರು ವಾಸಿಯಾದ ದೊರೆ. ಇವನು ಬಹುಕಾಲ ತಪಸ್ಸುಮಾಡಿ ದತ್ತಾತ್ರೇಯ ಋಷಿಯ ಕೃಪೆಗೆ ಪಾತ್ರನಾಗಿ, ವರ ಪಡೆದನು. ಅವನಿಗೆ ಒಂದುಸಾವಿರ ತೋಳುಗಳು. ಇಷ್ಟಬಂದಲ್ಲಿಗೆ ಒಂದೇ ಕ್ಷಣದಲ್ಲಿ ಹೋಗುವಂತಹ ಚಿನ್ನದ ರಥವನ್ನೂ, ವಿಮಾನವನ್ನೂ ಪಡೆದಿದ್ದನು. ಇಂತಹ ಅಪೂರ್ವ ಸಲಕರಣೆಯನ್ನು ಹೊಂದಿದ ಮೇಲೆ ಯುದ್ಧಮಾಡಬೇಕೆಂಬ ಆಸೆ ಹುಟ್ಟಿತು. ಅವನು ಕಂಡ ಕಂಡವರನ್ನು ಕಾಲುಕೆರೆದು ಯುದ್ಧಕ್ಕೆ ಕರೆಯುತ್ತಿದ್ದನು. ದೇವತೆಗಳು, ಯಕ್ಷರು, ಗಂಧರ್ವರು, ಋಷಿಗಳು, ಎಲ್ಲರನ್ನೂ ಹಿಡಿದು ಹಿಂಸಿಸುವುದಕ್ಕೆ ಪ್ರಾರಂಭಿಸಿದನು. ಇಂದ್ರನನ್ನು ಸೋಲಿಸಿ, ಶಚೀದೇವಿ ಯನ್ನು ಅಪಹರಿಸಲು ಯತ್ನಿಸಿದನು. ತನಗೆ ಸಮಾನರಾದವರು ಯಾರೂ ಇಲ್ಲವೆಂಬ ದುರಹಂಕಾರ ಹುಟ್ಟಿತು ಅವನಿಗೆ.

ಕಾರ್ತವೀರ್ಯಾರ್ಜುನನ ಹಿಂಸೆಯನ್ನು ತಡೆಯಲಾರದೆ, ದೇವತೆಗಳು, ವಿಷ್ಣುವಿನಲ್ಲಿ ಮೊರೆ ಇಟ್ಟರು. ಅವನಿಂದ ಇಂದ್ರನಿಗೂ ಶಚೀದೇವಿಗೂ

ಆದ ಅವಮಾನವನ್ನು ತಿಳಿಸಿದರು. ಅವನನ್ನು ನಿಗ್ರಹಿಸಿ ತಮ್ಮನ್ನು ರಕ್ಷಿಸಬೇಕೆಂದು ಇಂದ್ರನಾದಿಯಾಗಿ ಎಲ್ಲ ದೇವತೆಗಳೂ ವಿಷ್ಣುವನ್ನು ಬೇಡಿದರು. ಆಗ ವಿಷ್ಣುವು ತಾನು ಜಮದಗ್ನಿಯ ಮಗನಾಗಿ ಹುಟ್ಟಿ, ದುಷ್ಟರನ್ನು ನಾಶಮಾಡುವುದಾಗಿ ಮಾತುಕೊಟ್ಟನು. ಅದರಂತೆ, ಬದರಿ ಕ್ಷೇತ್ರದಲ್ಲಿ ಜಮದಗ್ನಿ ಋಷಿಯು ಪತ್ನಿಸಮೇತನಾಗಿದ್ದಾಗ, ರೇಣುಕಾ ದೇವಿಯ ಗರ್ಭದಲ್ಲಿ ಪರಶುರಾಮನಾಗಿ ಅವತರಿಸಿದನು.

ಪರಶುರಾಮನು ಮಹಾತೇಜಸ್ವಿ, ಪ್ರತಿಭಾಶಾಲಿ, ಬ್ರಾಹ್ಮಣ ಕುಲದಲ್ಲಿ ಜನಿಸಿದ್ದರೂ ಕೂಡ, ಕ್ಷತ್ರಿಯಗುಣವೇ ಅವನಲ್ಲಿ ಹೆಚ್ಚಾಗಿತ್ತು. ತನ್ನ ತಂದೆಯ ಹತ್ತಿರ ಸಕಲ ಶಾಸ್ತ್ರಗಳನ್ನೂ ಕಲಿತನು. ಆ ಮೇಲೆ ತನ್ನ ಹಗೆಯಾದ ಸ್ಕಂದನನ್ನು ಸೋಲಿಸಬೇಕೆಂಬ ಹಠದಿಂದ, ಪರಶಿವನ ಹತ್ತಿರ ಹೋಗಿ ಧನುರ್ವಿದ್ಯೆಯನ್ನು ಕಲಿತನು. ಇವನ ಉತ್ಸಾಹವನ್ನೂ, ಬುದ್ಧಿ ಶಕ್ತಿಯನ್ನೂ ಕಂಡು, ಪರಮೇಶ್ವರನು ಇವನಿಗೆ ಉತ್ತಮ ಅಸ್ತ್ರ ವಿದ್ಯೆ ಯನ್ನು ಕಲಿಸಿದನು. ಹೀಗಿರುವಾಗ ಒಂದುದಿನ ಪರಶುರಾಮನು, ಪರ ಶಿವನ ಎದುರಿನಲ್ಲಿ ಒಂದು ಹರಿತವಾದ ಬಾಣವನ್ನು ತೆಗೆದುಕೊಂಡು, ಕ್ರೌಂಚಪರ್ವತದ ಶಿಖರಕ್ಕೆ ಗುರಿಇಟ್ಟು ಹೊಡೆದನು. ಆ ಬಾಣವು, ಮಣ್ಣು ಮುದ್ದೆಯ ಮಧ್ಯದಲ್ಲಿ ತೂರಿಹೋಗುವಂತೆ, ಆ ಶಿಖರದ ಬಂಡೆ ಯನ್ನು ಕೊರೆದುಕೊಂಡು ಹೋಯಿತು. ಇದನ್ನು ನೋಡಿ ದೇವತೆಗಳಿ ಗೆಲ್ಲಾ ಆಶ್ಚರ್ಯವಾಯಿತು. ಮಹಾದೇವನಿಗಂತೂ ಅಪಾರ ಸಂತೋಷ ವಾಯಿತು. ಪರಶುರಾಮನ ಧನುರ್ವಿದ್ಯೆಯ ಪ್ರಭಾವವು ಅಂದಿನಿಂದ ಜಗತ್ತಿನಲ್ಲಿ ಹರಡಿತು. ಅವನು ಉತ್ತಮೋತ್ತಮ ಧನುರ್ಬಾಣಗಳನ್ನು ಪರಮೇಶ್ವರನಿಂದ ಪಡೆದು, ತನ್ನ ಆಶ್ರಮಕ್ಕೆ ಹಿಂದಿರುಗಿದನು.

ಒಂದುಸಲ ದೇವತೆಗಳಿಗೂ ರಾಕ್ಷಸರಿಗೂ ದೊಡ್ಡಯುದ್ಧ ಪ್ರಾರಂಭ ವಾಯಿತು. ದೇವತೆಗಳು ಮಹಾದೇವನ ಸಹಾಯ ಕೇಳಿದರು. ಅವನು ತನಗೆ ಪ್ರತಿಯಾಗಿ ಪರಶುರಾಮನನ್ನು ಯುದ್ಧಕ್ಕೆ ಕಳುಹಿಸಿದನು. ಮಹಾ ದೇವನ ಆಶೀರ್ವಾದ ಪಡೆದು ಪರಶುರಾಮನು, ರಾಕ್ಷಸರೊಡನೆ ಯುದ್ಧ ಮಾಡಿ, ಅವರನ್ನು ನಾಶಮಾಡಿದನು. ಪರಶಿವನು ಅವನ ಪರಾಕ್ರಮಕ್ಕೆ ಮೆಚ್ಚಿ ಉತ್ತಮ ಅಸ್ತ್ರಗಳನ್ನು ಕೊಟ್ಟನು.

ಹೈಹಯರ ರಾಜನಾದ ಕಾರ್ತವೀರ್ಯಾರ್ಜುನನು, ಇಡೀ ಭೂಮಂಡಲವನ್ನು ಗೆದ್ದು ಚಕ್ರವರ್ತಿ ಎನ್ನಿಸಿಕೊಂಡನು. ಅವನ ರಾಜ್ಯದಲ್ಲಿ ಏಳು ದ್ವೀಪಗಳಿದ್ದುವು. ಅವುಗಳಲ್ಲಿ ಏಳುನೂರು ಯಾಗಗಳನ್ನು ಮಾಡಿದನು. ಅವನ ಯಾಗ, ದಾನ, ತಪಸ್ಸು ಜ್ಞಾನಕ್ಕೆ ಸಮಾನರಾದವರು ಇನ್ನೊಬ್ಬ ನಿರಲಿಲ್ಲ. ಹೀಗೆ ಅವನು ೮೫೦೦೦ ವರ್ಷಕಾಲ ರಾಜ್ಯವಾಳಿದನು. ಅವನು ಆಗಾಗ ಸಮುದ್ರದಲ್ಲಿ ಜಲಕ್ರೀಡೆಯಾಡುತ್ತಿದ್ದನು. ಒಂದು ಸಲ ಅವನು ತಾನು ಸಂಪಾದಿಸಿದ ಇಡೀ ಭೂಮಂಡಲವನ್ನು ಅಗ್ನಿಗೆ ದಾನಮಾಡಿದನು. ಅಗ್ನಿಯು ಅದನ್ನೆಲ್ಲ ಭಕ್ಷಿಸಿಬಿಟ್ಟನು. ಇದರಿಂದ ವಶಿಷ್ಠ ಋಷಿಯ ಪುಣ್ಯಾಶ್ರಮವೂ ಸುಟ್ಟುಹೋಯಿತು. ಅದನ್ನು ಕಂಡು ಅವನಿಗೆ ಕೋಪ ವುಂಟಾಯಿತು. ಅವನು ಕಾರ್ತವೀರ್ಯನನ್ನು ಶಪಿಸಿದನು. ಇದರಿಂದ ಅವನಿಗೆ ಅಂತ್ಯಕಾಲ ಸಮೀಪಿಸಿದಂದಾಯಿತು.

ಹೀಗಿರುವಾಗ ರಾಜನಾದ ಕಾರ್ತವೀರ್ಯನು ಅಹಂಕಾರದಿಂದ ಮತ್ತ ನಾಗಿ ಜಮದಗ್ನಿಯ ಆಶ್ರಮಕ್ಕೆ ಬಂದನು. ಆಗ ಆಶ್ರಮದಲ್ಲಿ ಅವನಾಗಲಿ, ಮಕ್ಕಳಾಗಲಿ ಯಾರೂ ಇರಲಿಲ್ಲ. ರೇಣುಕಾದೇವಿಯು ಅವನಿಗೆ ರಾಜ ಯೋಗ್ಯವಾದ ಸ್ವಾಗತವನ್ನು ನೀಡಿದಳು. ಯುದ್ಧೋನ್ಮತ್ತನಾದ ರಾಜನು ಇದರಿಂದ ತೃಪ್ತನಾಗಲಿಲ್ಲ. ಜಮದಗ್ನಿಯ ಹೋಮಧೇನುವಿನ ಕರು ವತ್ಸವನ್ನು ಬಲವಂತವಾಗಿ ಹಿಡಿದು ಎಳೆದನು. ಜೊತೆಯಲ್ಲಿ ಕೊಂಡೊಯ್ದನು. ಹಸುವಿನ ಗೋಳನ್ನು ನೋಡಲು ಕಷ್ಟವಾಯಿತು. ಋಷಿಯ ನಿತ್ಯಕರ್ಮಕ್ಕೆ ಹಾಲು ಮೊಸರು ಇಲ್ಲವಾಯಿತು. ಇದನ್ನು ಕಂಡು ಪರಶುರಾಮನಿಗೆ ಕೋಪ ಬಂತು. ರಾಜನ ರಾಜಧಾನಿಯಾದ ಮಾಹಿಷ್ಮತೀ ನಗರಕ್ಕೆ ಬಂದು ಯುದ್ಧಹೂಡಿದನು. ತನ್ನ ದಿವ್ಯಾಸ್ತ್ರ ಗಳಿಂದ ರಾಜನ ಸಾವಿರ ತೋಳುಗಳನ್ನು ಕತ್ತರಿಸಿದನು. ಅವನನ್ನೂ ಅವನ ಪರಿವಾರವನ್ನೂ ಕೊಂದು ಪರಶುರಾಮನು ಕರುವನ್ನು ತಂದು ತಂದೆಗೊಪ್ಪಿಸಿದನು. ಇದರಿಂದ ತಂದೆಯ ನಿತ್ಯಕರ್ಮವು ನಡೆಯಲನು ಕೂಲವಾಯಿತು. ಆಶ್ರಮದಲ್ಲಿ ಶಾಂತಿ ನೆಲಸಿತು.

ಒಂದುದಿನ ರೇಣುಕಾದೇವಿಯು ನಿಯತವ್ರತದಂತೆ ನದಿಗೆ ಸ್ನಾನಕ್ಕೆ ಹೋದಳು. ಅಲ್ಲಿ ಚಿತ್ರರಥನೆಂಬ ಗಂಧರ್ವನು, ಕಮಲದ

ಹಾರವನ್ನು ಧರಿಸಿ, ಪ್ರತ್ನಿಯರೊಡನೆ ಜಲಕ್ರೀಡೆಯಾಡುತ್ತಿದ್ದುದನ್ನು ಅವಳು ನೋಡಿದಳು. ಆ ಸುಂದರಸೋಟವನ್ನು ಕಂಡು, ತಾನೂ ಹಾಗೆ ಮಾಡಬೇಕೆಂಬ ಆಸೆ ಅವಳಲ್ಲಿ ಅಂಕುರವಾಯಿತು. ಆದರೆ ವ್ಯಭಿಚಾರ ದೋಷಕ್ಕೆ ಹೆದರಿ, ಸ್ನಾನಮಾಡಿ ಆಶ್ರಮಕ್ಕೆ ಬಂದಳು. ಆದರೆ ಅವಳಲ್ಲಿ ಉಂಟಾದ ಹೆದರಿಕೆ ಹೋಗಿರಲಿಲ್ಲ. ಅವಳಲ್ಲಿ ಅಂಕುರವಾದ ಪಾಪ ಯೋಚನೆ ಜಮದಗ್ನಿಗೆ ಹೊಳೆಯಿತು. ಕೂಡಲೇ ಅವನಿಗೆ ಕೋಪ ವುಂಟಾಯಿತು. ತನ್ನ ಮೊದಲಿನ ನಾಲ್ಕು ಮಕ್ಕಳನ್ನೂ ಕರೆದು, ರೇಣುಕಾ ದೇವಿಯ ತಲೆ ಕತ್ತರಿಸುವಂತೆ ಅಪ್ಪಣೆ ಇತ್ತನು. ತಾಯಿಯ ಮೇಲೆ ಅವರಿಗಿದ್ದ ಮೋಹದಿಂದ ಅವರ್ಯಾರೂ ಹಾಗೆ ಮಾಡಲಿಲ್ಲ. ಇದನ್ನು ನೋಡಿ, ಜಮದಗ್ನಿಗೆ ಇನ್ನೂ ಹೆಚ್ಚಿನ ಕೋಪ ಬಂದಿತು. ಅವರನ್ನೆಲ್ಲಾ ದುಷ್ಟಪ್ರಾಣಿಗಳಾಗಿ ಹುಟ್ಟುವಂತೆ ಶಪಿಸಿದನು. ಅಷ್ಟು ಹೊತ್ತಿಗೆ ಪರಶು ರಾಮನು ಆಶ್ರಮಕ್ಕೆ ಬಂದನು. ತಾಯಿಯ ತಲೆ ಕಡಿಯುವಂತೆ ಅವನಿಗೂ ತಂದೆಯ ಅಪ್ಪಣೆ ಆಯಿತು. ರಾಮನು ಕೂಡಲೆ ತನ್ನ ಕೈಯಲ್ಲಿದ್ದ ಕೊಡಲಿಯಿಂದ ರೇಣುಕಾದೇವಿಯ ತಲೆಯನ್ನು ಕಡಿದು ಬಿಟ್ಟನು. ತಂದೆಗೆ ಇದನ್ನು ಕಂಡು ಸಂತೋಷವಾಯಿತು. ಬೇಕಾದ ವರಗಳನ್ನು ಕೇಳುವಂತೆ ಮಗನಿಗೆ ಹೇಳಿದನು.

ಆಗ ಪರಶುರಾಮನು, ತನ್ನ ತಾಯಿಯು ಎದ್ದು ಕುಳಿತುಕೊಳ್ಳು ವಂತಾಗಬೇಕೆಂದೂ, ಹಿಂದೆ ನಡೆದುದೊಂದೂ ಅವಳ ಜ್ಞಾಪಕಕ್ಕೆ ಬರದಿರಬೇಕೆಂದೂ, ತನ್ನ ಸಹೋದರರೆಲ್ಲಾ ಮುನ್ನಿನರೂಪಕ್ಕೆ ಬರು ವಂತಾಗಬೇಕೆಂದೂ, ತಾನು ಮಾಡಿದ ಕಾರ್ಯದ ಪಾಪವು ತನಗುಂಟಾಗ ಬಾರದೆಂದೂ ತಂದೆಯನ್ನು ಬೇಡಿದನು. ಹಾಗೆಯೇ ಆಗಲೆಂದು ಜಮದಗ್ನಿಯು ಹರಸಿದನು.

ಕಾರ್ತವೀರ್ಯನು ಮಡಿದ ಮೇಲೆ ಹೈಹಯರಿಗೂ, ಭೃಗುಗಳಿಗೂ ಹಿಂದೆ ಇದ್ದ ದ್ವೇಷ ಇನ್ನೂ ಮಾಯವಾಗಿರಲಿಲ್ಲ. ಒಂದು ದಿನ ಜಮದಗ್ನಿಯ ಮಕ್ಕಳು ಆಶ್ರಮದಲ್ಲಿ ಇಲ್ಲದಿದ್ದಾಗ, ಕಾರ್ತವೀರ್ಯನ ಮಕ್ಕಳು ಆಶ್ರಮ ವನ್ನು ಮುತ್ತಿದರು. ವೃದ್ಧನೂ, ಅಶಕ್ತನೂ ಆಗಿದ್ದ ಜಮದಗ್ನಿಯನ್ನು ಕೊಂದರು. ಕಾಡಿನಿಂದ ಹಿಂತಿರುಗಿದ ಪರಶುರಾಮನು ಇದನ್ನು ಕಂಡು

ದುಃಖಪಟ್ಟನು. ತಂದೆಯ ಮರಣಕ್ಕೆ ಕಾರಣರಾದ ಕ್ಷತ್ರಿಯರನ್ನೇ ನಾಶಮಾಡುವುದಾಗಿ ಶಪಥ ಮಾಡಿದನು. ಇಡೀ ಭೂಮಂಡಲದಲ್ಲಿ ಕ್ಷತ್ರಿಯರ ಕುಲವೇ ಇಲ್ಲದಂತೆ ಮಾಡಬೇಕೆಂದು ನಿಶ್ಚಯಿಸಿ ಗಂಡುಕೊಡಲಿಯನ್ನೂ, ಧನುರ್ಬಾಣಗಳನ್ನೂ ಹಿಡಿದು ಭೂಪ್ರದಕ್ಷಿಣೆ ಹೊರಟನು. ಹೀಗೆ ಇಪ್ಪತ್ತೊಂದು ಸಲ ಭೂಮಂಡಲವನ್ನು ಸುತ್ತಿ, ಕ್ಷತ್ರಿಯರನ್ನೆಲ್ಲಾ ಕೊಂದು ಅವರ ರಕ್ತದ ಮಡುವಿನಲ್ಲಿ ತಂದೆಯ ತೃಪ್ತಿಗಾಗಿ ತರ್ಪಣ ಮಾಡಿದನು. ಅನೇಕ ಕ್ಷತ್ರಿಯರು ಮಡಿದ ಮೇಲೆ ಅವರ ರಾಜ್ಯಗಳೆಲ್ಲಾ ಪರಶುರಾಮನ ಪಾಲಿಗೆ ಬಂದುವು. ಹಾಗೆ ಬಂದ ರಾಜ್ಯಗಳನ್ನು ಕಶ್ಯಪನಿಗೆ ಅವನು ದಾನಮಾಡಿದನು. ಹೀಗೆ ದಾನಮಾಡಿದ ರಾಜ್ಯದಲ್ಲಿ ಅವನಿರ ಕೂಡದೆಂದು ಕಶ್ಯಪನು ಹೇಳಲು, ಪರಶುರಾಮನು ಮಹೇಂದ್ರಪರ್ವತಕ್ಕೆ ತಪಸ್ಸುಮಾಡಲು ಹೊರಟುಹೋದನು.

* * *

ಮಹೇಂದ್ರಪರ್ವತದಲ್ಲಿ ಅವನಿರುತ್ತಿದ್ದಾಗ, ಕುಂತೀದೇವಿಯ ಮಗನಾದ ಕರ್ಣನು ಅಸ್ತ್ರವಿದ್ಯೆ ಕಲಿಯಲು ಅಲ್ಲಿಗೆ ಬರುವನು. ಬ್ರಾಹ್ಮಣ ವೇಷಧಾರಿಯಾಗಿ ಬಂದು ಪರಶುರಾಮನಿಗೆ ನಮಸ್ಕಾರಮಾಡಿ: ತನ್ನನ್ನು ಶಿಷ್ಯನನ್ನಾಗಿ ಅಂಗೀಕರಿಸಬೇಕೆಂದು ಬೇಡುವನು. ಪರಶುರಾಮನು ಒಪ್ಪಿ ಅವನಿಗೆ ಮಂತ್ರಪೂರ್ವಕವಾಗಿ ಮಹಾಸ್ತ್ರಗಳನ್ನೆಲ್ಲಾ ಹೇಳಿಕೊಡುವನು. ಅವನ್ನು ಆಪತ್ಕಾಲದಲ್ಲಿ ವಿನಹ ಬೇರೆ ಕಾಲಗಳಲ್ಲಿ ಉಪಯೋಗಿಸಬಾರದೆಂದು ಕರ್ಣನಿಗೆ ಎಚ್ಚರಿಕೆ ಕೊಡುವನು.

ಹೀಗಿರಲು ಒಂದು ದಿನ ಗುರುವು ಆಶ್ರಮದ ಹೊರಗಡೆ ಮರದ ನೆರಳಿನಲ್ಲಿ ಮಲಗಿರುವುದನ್ನು ಶಿಷ್ಯನು ನೋಡುವನು. ತಲೆಗೆ ದಿಂಬಿಲ್ಲದೆ ಮಲಗಿರುವ ಗುರುವಿನ ತಲೆಯನ್ನು ಮೆಲ್ಲಗೆ ಎತ್ತಿ ತನ್ನ ತೊಡೆಯ ಮೇಲಿಟ್ಟುಕೊಳ್ಳುವನು. ಗುರುವು ಚೆನ್ನಾಗಿ ನಿದ್ರೆಮಾಡುತ್ತಿದ್ದಾಗ, ಇಂದ್ರನು ತನ್ನ ಮಗನಾದ ಅರ್ಜುನನಿಗೆ ಹಿತವನ್ನು ಕೋರುವ ನೆಪದಿಂದ, ದುಂಬಿಯ ರೂಪದಲ್ಲಿ ಬಂದು, ಕರ್ಣನ ತೊಡೆಯನ್ನು ಕೊರೆದು ರಕ್ತ ಸುರಿಯುವಂತೆ ಮಾಡುವನು. ಕರ್ಣನು ನೋವನ್ನು ಸಹಿಸಿಕೊಂಡು

ಗುರುವಿಗೆ ನಿದ್ರಾಭಂಗವಾಗುವದೆಂಬ ಭಯದಿಂದ ಹಾಗೆಯೇ ಕುಳಿತಿರುವನು. ಆದರೆ ಅವನ ತೊಡೆಯಿಂದ ಹರಿದ ರಕ್ತವು ಗುರುವಿನ ತಲೆಯನ್ನು ನೆನಸಿತು. ಗುರುವಿಗೆ ಎಚ್ಚರವಾಯಿತು. ಕದಲದೆ ಕುಳಿತಿರುವ ಶಿಷ್ಯ ಕರ್ಣನನ್ನು ನೋಡುವನು. ಆಶ್ಚರ್ಯದಿಂದ, 'ಎಲೈ! ನೀನು ಬ್ರಾಹ್ಮಣನಲ್ಲ. ಇಷ್ಟುನೋವನ್ನು ಸಹಿಸಿಕೊಂಡು ಕುಳಿತುಕೊಳ್ಳುವ ಸ್ವಭಾವ ಬ್ರಾಹ್ಮಣನಿಗಿಲ್ಲ. ನೀನು ಯಾರು, ನಿಜವನ್ನು ಹೇಳು. ಇಲ್ಲದಿದ್ದರೆ ಶಾಪವನ್ನು ಕೊಡುವೆನು' ಎಂದು ಪರಶುರಾಮನು ಕೋಪದಿಂದ ಹೇಳುವನು.

ಆಗ ಕರ್ಣನು ತಾನು ಸೂತಪುತ್ರನೆಂದೂ, ವಿದ್ಯೆ ಕಲಿಯಬೇಕೆಂಬ ಉತ್ಸಾಹದಲ್ಲಿ ತಾನು ಸುಳ್ಳು ಹೇಳಬೇಕಾಯಿತೆಂದೂ, ಕ್ಷಮಿಸಬೇಕೆಂದೂ ಗುರುವನ್ನು ಬೇಡುವನು. ಪರಶುರಾಮನ ಕೋಪ ಹೋಗಲಿಲ್ಲ. ಬ್ರಾಹ್ಮಣನಲ್ಲದಿದ್ದರೂ ಬ್ರಾಹ್ಮಣನೆಂದು ಸುಳ್ಳು ಹೇಳಿ, ಅನೇಕ ಅಸ್ತ್ರಗಳನ್ನು ಪಡೆದನಾದ ಕಾರಣ ಅವೊಂದೂ ತಕ್ಕ ಸಮಯದಲ್ಲಿ ಅವನ ಜ್ಞಾಪಕಕ್ಕೆ ಬಾರದೇ ಹೋಗಲಿ, ಮರಣಕಾಲದಲ್ಲಿ ವಿನಹ, ಉಳಿದ ಕಾಲದಲ್ಲಿ ಆ ಮಂತ್ರಾಸ್ತ್ರಗಳೆಲ್ಲ ನೆನಪಿಗೆ ಬರಲಿ ಎಂದು ಶಪಿಸಿದನು. ಶಾಪಗ್ರಸ್ತನಾದ ಕರ್ಣನು ಗುರುವಿಗೆ ನಮಸ್ಕರಿಸಿ, ದುಃಖಪೀಡಿತನಾಗಿ ತನ್ನ ಪಟ್ಟಣಕ್ಕೆ ಹೊರಟು ಹೋಗುವನು.

* * *

ಹೀಗಿರುವಾಗ, ದಶರಥ ಚಕ್ರವರ್ತಿಯ ಮಗನಾದ ಶ್ರೀರಾಮನು ಶೈವಧನುಸ್ಸನ್ನು ಮುರಿದು, ಜನಕಪುತ್ರಿಯಾದ ಸೀತಾದೇವಿಯನ್ನು ವಿವಾಹ ಮಾಡಿಕೊಂಡ ವಿಷಯವು ಪರಶುರಾಮನಿಗೆ ತಿಳಿಯಿತು. ದಶರಥನು ಮಕ್ಕಳ ವಿವಾಹವಾದ ಮೇಲೆ ತನ್ನ ಪರಿವಾರಸಮೇತ ಅಯೋಧ್ಯಾ ಪಟ್ಟಣಕ್ಕೆ ಹೋಗುತ್ತಿದ್ದನು. ಈ ವಿಚಾರ ತಿಳಿದು ಪರಶುರಾಮನು ತನ್ನಲ್ಲಿದ್ದ ವೈಷ್ಣವಧನುಸ್ಸನ್ನು ತೆಗೆದುಕೊಂಡು ಹೊರಟನು. ದಶರಥ ರಾಜನ ಎದುರಿಗೆ ಪರಶುರಾಮನು ಬಂದು ನಿಂತಾಗ ಅವನಿಗೆ ಭಯವಾಯಿತು. ಪರಶುರಾಮನ ಅಂದಿನ ಆಕಾರ ಎಂತಹವರಿಗೂ ಭಯ ಹುಟ್ಟಿಸುವುದಾಗಿತ್ತು. ತಲೆಯಲ್ಲಿ ಜಡೆ. ಕಾಲಾಗ್ನಿಯಂತೆ ಜ್ವಲಿಸುವ

ಕಣ್ಣುಗಳು. ಹೆಗಲಿನ ಮೇಲೆ ಹರಿತವಾದ ಕೊಡಲಿ. ಕೈಯಲ್ಲಿ ಮಿಂಚಿನಂತೆ ಹೊಳೆಯುವ ಬಿಲ್ಲು ಮತ್ತು ಬಾಣ. ಹಣೆಯಲ್ಲಿ ವಿಭೂತಿ. ಕತ್ತಿನಲ್ಲಿ ರುದ್ರಾಕ್ಷಿಯ ಸರ. ಮಹಾರುದ್ರನಂತಿರುವ ಆಕಾರವನ್ನು ನೋಡಿ ದಶರಥನು ನಡುಗಿದನು. ಕೂಡಲೇ ಎದ್ದು, ಆವನಿಗೆ ನಮಸ್ಕರಿಸಿ ಅರ್ಘ್ಯ ಪಾದ್ಯಾದಿಗಳಿಂದ ಉಪಚರಿಸಿ, ಕೈಮುಗಿದು ನಿಂತು, 'ಮಹಾತ್ಮಾ, ನೀನು ಮಹಾತಪಸ್ವಿ, ಉತ್ತಮನಾದ ಬ್ರಾಹ್ಮಣ. ಶಾಂತಿ ಎಂಬುದೇ ನಿನ್ನಂತಹವರಿಗೆ ತಕ್ಕ ಭೂಷಣ. ತಾಳ್ಮೆಗಿಂತ ಉತ್ತಮಗುಣ ಇನ್ಯಾವುದಿದೆ ? ಧರ್ಮವನ್ನು ತಿಳಿದ ಮಹಾಮಹಿಮನು ನೀನು. ಕ್ಷತ್ರಿಯರ ಮೇಲೆ ನಿನಗೆ ಹಿಂದೆ ಇದ್ದ ಕೋಪವೆಲ್ಲ ಮಾಯವಾಗಿಹೋಯಿತೆಂದು ಕೇಳಿರುವೆನು. ವ್ರತನಿಷ್ಠರಾದ ಭೃಗುವಂಶಶ್ರೇಷ್ಠನು ನೀನು. ಇನ್ನು ಮುಂದೆ ಅಸ್ತ್ರವನ್ನು ಹಿಡಿಯುವುದಿಲ್ಲವೆಂದು ಶಪಥಮಾಡಿ, ಮಹಾಸ್ತ್ರಗಳನ್ನೆಲ್ಲಾ ಇಂದ್ರನಿಗೆ ಕೊಟ್ಟಿರುವೆಯಲ್ಲವೆ ? ಇದೇನು ಇಲ್ಲಿಗೆ ಬಂದುದು ? ಅಪ್ಪಣೆಕೊಡು. ಶ್ರೀರಾಮನನ್ನು ಬಿಟ್ಟುಕೊಡುವೆಯಾನೆ ? ಬಂದಕಾರಣವನ್ನು ದಯವಿಟ್ಟು ತಿಳಿಸು' ಎಂದು ಕೇಳಿದನು.

ಪರಶುರಾಮನು ದಶರಥನ ಮಾತುಗಳನ್ನು ಲಕ್ಷ್ಯಮಾಡದೆ, ಶ್ರೀರಾಮನನ್ನು ಕುರಿತು, 'ವತ್ಸಾ ! ರಾಮಾ ! ಲೋಕದಲ್ಲಿ ಪ್ರಸಿದ್ಧವಾದುವು. ಎರಡು ಧನುಸ್ಸು. ಅವೆರಡೂ ವಿಶ್ವಕರ್ಮನಿಂದ ನಿರ್ಮಿತವಾದುವು. ಅವುಗಳಲ್ಲಿ ಒಂದನ್ನು ದೇವತೆಗಳೆಲ್ಲ ಸೇರಿ, ತ್ರಿಪುರಸಂಹಾರಕ್ಕಾಗಿ ರುದ್ರನಿಗೆ ಕೊಟ್ಟರು. ಕಾರಣಾಂತರದಿಂದ ಅದು ಜನಕರಾಜನ ವಶಕ್ಕೆ ಬಂದಿತು. ಅದನ್ನೇ ನೀನು ಈಗ ಮುರಿದುದು. ಇನ್ನೊಂದು ಅದಕ್ಕಿಂತಲೂ ಬಲವಾದುದು. ಇದೋ ನನ್ನಲ್ಲಿದೆ. ಇದನ್ನು ದೇವತೆಗಳು ಹಿಂದೆ ವಿಷ್ಣುವಿಗೆ ಕೊಟ್ಟರು. ಇದು ವೈಷ್ಣವ ಧನುಸ್ಸು. ವಿಷ್ಣುವು ನಮ್ಮ ತಾತ ಋಚೀಕ ಮಹರ್ಷಿಗೆ ಕೊಟ್ಟನು. ಅವರಿಂದ ನನ್ನ ತಂದೆ ಜಮದಗ್ನಿಗೂ, ಅವರಿಂದ ನನಗೂ ಪರಂಪರೆಯಾಗಿ ಬಂದಿದೆ. ಇದರಿಂದಲೇ ಭೂಮಂಡಲದ ಕ್ಷತ್ರಿಯರನ್ನು ಕೊಂದಿದ್ದೇನೆ. ನೀನು ಶೈವಧನುಸ್ಸನ್ನು ಮುರಿದ ವಿಚಾರ ಕೇಳಿ ಇಲ್ಲಿಗೆ ಬಂದೆ. ಇಗೋ ಈ ಧನುಸ್ಸು ತೆಗೆದುಕೋ. ಇದನ್ನು ಕಟ್ಟಿ ನಾಣೇರಿಸು. ನಿನ್ನ ಶಕ್ತಿಯನ್ನು

ನೋಡುವೆನು. ನೀನು ನಿಜವಾದ ಕ್ಷತ್ರಿಯನಾಗಿದ್ದರೆ, ಕ್ಷತ್ರಿಯ ಯೋಗ್ಯವಾದ ಪರಾಕ್ರಮನ್ನು ತೋರಿಸು. ನಿನ್ನ ಶಕ್ತಿಯನ್ನು ನೋಡಿ ಅನಂತರ ದ್ವಂದ್ವಯುದ್ಧಕ್ಕೆ ಬೇಕಾದರೂ ನಿನ್ನೊಡನೆ ನಿಲ್ಲುವೆನು' ಎಂದನು.

ಪರಶುರಾಮನ ಮಾತುಗಳನ್ನು ಕೇಳಿ ಶ್ರೀರಾಮನಿಗೆ ಕೋಪ ಬಂತು. ಯಾವ ಕ್ಷತ್ರಿಯನಿಗೆ ತಾನೆ ಕೋಪ ಬರಲಿಕ್ಕಿಲ್ಲ? ಆದರೂ ಕೋಪ ತೋರಿಸುವುದಕ್ಕೆ ಅದು ತಕ್ಕ ಸಮಯವಲ್ಲ. ತಂದೆ ಸಮೀಪದಲ್ಲಿದ್ದಾರೆ, ಅವರಿಗಾದರೂ ಗೌರವ ಸಲ್ಲಿಸಬೇಕಲ್ಲವೇ? ಪರಶುರಾಮನ ಕ್ರೂರ ನುಡಿಗಳನ್ನು ಕೇಳಿಯೂ ಕೋಪ ತೋರಿಸದೆ, ವಿನಯದಿಂದ 'ಎಲೈ ಭಾರ್ಗವ ವಂಶಜನೇ! ಪಿತೃಋಣವನ್ನು ತೀರಿಸುವುದಕ್ಕೆ ನೀನು ಮಾಡಿದ ಮಹಾ ಕಾರ್ಯಗಳನ್ನು ಕೇಳಿರುವೆನು. ಶೂರರು ಮಾಡತಕ್ಕ ಕೆಲಸ ಅದು. ನ್ಯಾಯಸಮ್ಮತವಾದುದು. ಆದರೆ ನಾನು ಅಶಕ್ತನೆಂದೂ, ಅಸಮರ್ಥನೆಂದೂ ಅವಮಾನಪಡಿಸುವುದು ಮಾತ್ರ ಸರಿಯಲ್ಲ. ಉಚಿತವೂ ಅಲ್ಲ ಇಗೋ ನೋಡು, ನನ್ನ ಪರಾಕ್ರಮವನ್ನು ತೋರಿಸುವೆನು' ಎಂದು ಹೇಳಿ ಶ್ರೀರಾಮನು, ಆ ವೈಷ್ಣವಧನುಸ್ಸನ್ನು ತೆಗೆದುಕೊಂಡು ನಾಣೇರಿಸಿ ಬಾಣಸಂಧಾನ ಮಾಡಿದನು. 'ಎಲೈ ಬ್ರಾಹ್ಮಣೋತ್ತಮಾ! ವಿಶ್ವಾಮಿತ್ರ ಋಷಿಯು ನನ್ನ ಗುರು. ನೀನು ಅವನ ಸಂಬಂಧಿ. ಆದುದರಿಂದ ಈಗ ನಿನ್ನನ್ನು ಉಳಿಸಬೇಕಾಗಿದೆ. ಇಲ್ಲದಿದ್ದರೆ, ಈ ಬಾಣವನ್ನು ನಿನ್ನ ಮೇಲೆ ಬಿಟ್ಟು ಬಿಡುತ್ತಿದ್ದೆ. ಇಗೋ ಬಾಣವನ್ನು ಅನುಸಂಧಾನ ಮಾಡಿದ್ದೇನೆ. ಅದು ವಿಷ್ಣುಶಕ್ತಿಯುಳ್ಳದ್ದು, ವ್ಯರ್ಥವಾಗತಕ್ಕದ್ದಲ್ಲ. ಇದಕ್ಕೆ ನಿನ್ನ ಸಂಚಾರಶಕ್ತಿಯನ್ನಾಗಲಿ ಅಥವಾ ತಪಸ್ಸಿನಿಂದ ಸಂಪಾದಿಸಿದ ಪುಣ್ಯ ಲೋಕಗಳನ್ನಾಗಲಿ ಆಹುತಿ ಕೊಡಲೇಬೇಕು. ಯಾವುದನ್ನು ಕೊಡುವೆ ಹೇಳು' ಎಂದು ಶ್ರೀರಾಮನು ಕೇಳಿದನು.

ಶ್ರೀರಾಮನ ಅದ್ಭುತ ಪರಾಕ್ರಮವನ್ನು ನೋಡಲು ದೇವತೆಗಳು ಆಕಾಶದಲ್ಲಿ ನೆರೆದರು. ಆಮೇಲೆ ಬ್ರಹ್ಮನನ್ನು ಮೊದಲಿಟ್ಟು ದೇವತೆಗಳೆಲ್ಲ ಅಲ್ಲಿಗೆ ಬಂದರು. ಪರಶುರಾಮನು ಇದನ್ನು ನೋಡಿ ಆಶ್ಚರ್ಯಪಟ್ಟನು. ಅವನ ವೀರ್ಯ ಉಡುಗಿಹೋಯಿತು. ತನ್ನ ಕಾಲ ಮುಗಿಯಿತೆಂದು ತಿಳಿದನು. ತನ್ನಲ್ಲಿದ್ದ ವಿಷ್ಣುವಿನ ಅಂಶವೆಲ್ಲಾ ಶ್ರೀರಾಮನಲ್ಲಿ

ಸೇರಿದುದನ್ನು ಕಂಡನು. 'ವತ್ಸಾ! ಶ್ರೀರಾಮ! ನನ್ನ ಗಮನಶಕ್ತಿಯನ್ನು ಕೆಡಿಸಬೇಡ. ಪುಣ್ಯಲೋಕಗಳನ್ನು ಬೇಕಾದರೆ ತಡೆದುಬಿಡು. ಬಾಣಪ್ರಯೋಗಮಾಡು. ನೀನೇ ಸಾಕ್ಷಾತ್ ವಿಷ್ಣುಸ್ವರೂಪನು. ನಿನಗೆ ಮಂಗಳವಾಗಲಿ. ಇದರಿಂದ ನನಗೆ ಪರಾಭವವೇನೂ ಇಲ್ಲ. ನಾನು ಮಹೇಂದ್ರಪರ್ವತಕ್ಕೆ ಹೋಗುವೆನು' ಎಂದು ಹೇಳಿ ಹೊರಟುಹೋದನು.

* * *

ಪರಶುರಾಮನ ಜೀವಮಾನದಲ್ಲಿ ಒದಗಿದ ಇನ್ನೊಂದು ಮಹತ್ವದ ಸಂಗತಿ ಇದೆ. ಅದೇನೆಂದರೆ, ಇವನಿಗೂ ಇವನ ಶಿಷ್ಯನಾದ ಭೀಷ್ಮನಿಗೂ ಒದಗುವ ಯುದ್ಧ. ಯುದ್ಧಕ್ಕೆ ಕಾರಣ ಅಲ್ಪವಿದ್ದೇ ಆಗಿದ್ದರೂ, ಅದರ ಪರಿಣಾಮ ಮಾತ್ರ ಭೀಕರ. ಈ ಮಹಾಯುದ್ಧ ಇಪ್ಪತ್ತೊಂದು ದಿವಸ ನಡೆಯಿತು. ಇದನ್ನು ಬಿಡಿಸುವುದಕ್ಕೆ ಪರಮೇಶ್ವರನೇ ಬರಬೇಕಾಯಿತು. ಆ ಯುದ್ಧ ಒದಗಿದ ಸಂದರ್ಭ ವಿಚಿತ್ರವಾಗಿದೆ.

ಕಾಶೀರಾಜನು ತನ್ನ ಮಕ್ಕಳಾದ ಅಂಬೆ, ಅಂಬಿಕೆ, ಅಂಬಾಲಿಕೆಯರ ಮದುವೆಗೆ ಸ್ವಯಂವರವೇರ್ಪಡಿಸಿದ್ದನು. ಅಲ್ಲಿಗೆ ಭೀಷ್ಮನು ಬಂದಿದ್ದನು. ತನ್ನ ತಮ್ಮನಿಗೆ, ಆ ಹೆಣ್ಣುಮಕ್ಕಳನ್ನು ಕರೆದುಕೊಂಡು ಹೋಗಿ ಮದುವೆ ಮಾಡುವುದು ಅವನ ಉದ್ದೇಶವಾಗಿತ್ತು. ಅಲ್ಲಿ ನೆರೆದಿದ್ದ ರಾಜರನ್ನೆಲ್ಲಾ ಭೀಷ್ಮನು ಸೋಲಿಸಿ, ಆ ಕನ್ನೆಯರನ್ನು ಕರೆದುಕೊಂಡು ಹೋದನು. ಅವರಲ್ಲಿ ಅಂಬೆಯು ಸಾಲ್ವರಾಜನನ್ನು ಮನಸ್ಸಿನಲ್ಲಿ ವರಿಸಿದ್ದಳಾದ್ದರಿಂದ, ಭೀಷ್ಮನ ತಮ್ಮನಾದ ವಿಚಿತ್ರವೀರ್ಯನನ್ನು ವಿವಾಹವಾಗಲು ಒಪ್ಪಲಿಲ್ಲ. ಭೀಷ್ಮನು ಅವಳ ಇಷ್ಟಪ್ರಕಾರ, ಅವಳನ್ನು ಸಾಲ್ವರಾಜನ ಬಳಿಗೆ ಕಳುಹಿಸಿಕೊಟ್ಟನು. ಆದರೆ ಸಾಲ್ವನು, ಭೀಷ್ಮನು ಗೆದ್ದು ಕರೆದುಕೊಂಡುಹೋದ ಕನ್ಯೆಯನ್ನು ವರಿಸಲು ಇಷ್ಟಪಡಲಿಲ್ಲ. ಭೀಷ್ಮನನ್ನು ವರಿಸುವಂತೆ ಹೇಳಿ ಕಳುಹಿಸಿಬಿಟ್ಟನು. ಭೀಷ್ಮನು ಅವಳನ್ನು ನಿರಾಕರಿಸಿ ಓಡಿಸಿದನು.

ಹೀಗೆ ತಿರಸ್ಕೃತಳಾದ ಅಂಬೆಯು, ತನ್ನ ತಾತನ ಮೂಲಕ ಪರಶುರಾಮನ ಬಳಿಗೆ ಬಂದು ಬೇಡಿದಳು. ಅಂಬೆಯ ತಾತನಾದ

ಅಕೃತವ್ರಣನು ಪರಶುರಾಮನಿಗೆ ನಮಸ್ಕರಿಸಿ, 'ರಾಮಾ! ಇವಳು ನನ್ನ ಮಗಳ ಮಗಳು. ಕಾಶೀರಾಜನ ಪುತ್ರಿ. ನಿನ್ನಿಂದ ಅವಳಿಗೆ ಮಹೋಪಕಾರ ವಾಗಬೇಕಾಗಿದೆ. ಅವಳ ಪ್ರಾರ್ಥನೆಯನ್ನು ಸಲ್ಲಿಸು' ಎಂದನು.

ಆಗ ಅಂಬೆಯು ಪರಶುರಾಮನಿಗೆ ನಮಸ್ಕಾರಮಾಡಿ, 'ಹೇ! ಭಗವನ್! ನಾನು ನಿನ್ನ ಶರಣುಹೊಂದಿರುವೆನು. ನನಗುಂಟಾಗಿರುವ ಭಯಂಕರ ದುಃಖವನ್ನು ಪರಿಹರಿಸು. ನನ್ನ ಸ್ವಯಂವರ ಕಾಲದಲ್ಲಿ ಭೀಷ್ಮನು ಬಂದು ಅಲ್ಲಿ ನೆರೆದಿದ್ದ ರಾಜರನ್ನೆಲ್ಲಾ ಸೋಲಿಸಿ, ನನ್ನನ್ನೂ ನನ್ನ ಸಹೋದರಿಯರನ್ನೂ ಕರೆದುಕೊಂಡು ಹೋದನು. ತನ್ನ ತಮ್ಮನಿಗೆ ನಮ್ಮನ್ನು ಮದುವೆಮಾಡಿಕೊಡಬೇಕೆಂದು ಯತ್ನಿಸುತ್ತಿದ್ದಾಗ, ನಾನು ಸಾಲ್ವರಾಜನನ್ನು ಹಿಂದೆಯೇ ಮನಸ್ಸಿನಲ್ಲಿ ವರಿಸಿರುವುದಾಗಿ ಹೇಳಿದೆ. ಕೂಡಲೆ ನನ್ನನ್ನು ಸಾಲ್ವರಾಜನ ಬಳಿಗೆ ಕಳುಹಿಸಿಬಿಟ್ಟನು. ಸಾಲ್ವನು, ಭೀಷ್ಮನು ಗೆದ್ದ ಕನ್ಯೆಯನ್ನು ತಾನು ವರಿಸುವುದಿಲ್ಲವೆಂದು ಹೇಳಿ ಬಿಟ್ಟನು. ಭೀಷ್ಮನೂ ಕೂಡ ನನ್ನನ್ನು ತಿರಸ್ಕರಿಸಿದ್ದಾನೆ. ಭೀಷ್ಮನಿಂದ ಇಷ್ಟೆಲ್ಲಾ ಅನರ್ಥವಾಯಿತು. ಅವನೇ ನನ್ನನ್ನು ವರಿಸುವಂತೆ ನೀನು ಅವನನ್ನು ಬಲಾತ್ಕರಿಸಬೇಕು. ಇಲ್ಲವೇ ಅವನಿಗೆ ತಕ್ಕ ಪ್ರತೀಕಾರ ಮಾಡಬೇಕು' ಎಂದು ಅಂಬೆಯು ಬೇಡಿದಳು.

'ಆಚಾರ್ಯಾ! ಮರೆಹೊಕ್ಕವರನ್ನು ನೀನು ಕೈಬಿಡಬಾರದು. ಭೀಷ್ಮನು ನಿನ್ನ ಶಿಷ್ಯ. ಅವನು ನಿನ್ನ ಮಾತನ್ನು ಕೇಳುವನು. ನೀನು ಹಿಂದೆ ಎಷ್ಟೋ ಕ್ಷತ್ರಿಯರನ್ನು ನಾಶಮಾಡಿರುವೆ. ಅವರ ಕೊಬ್ಬನ್ನು ಮುರಿದಿರುವೆ. ಭೀಷ್ಮನು ನಿನ್ನ ಮಾತನ್ನು ಕೇಳದಿದ್ದರೆ, ಅವನನ್ನು ಯುದ್ಧಕ್ಕೆ ಕರೆದು ಪರಾಜಿತನನ್ನಾಗಿ ಮಾಡುವ ಶಕ್ತಿ ನಿನಗಿದೆ. ಕೊಬ್ಬಿದ ಭೀಷ್ಮನ ಹೆಮ್ಮೆಯನ್ನು ಮುರಿದು ಅಂಬೆಯ ಪ್ರಾರ್ಥನೆಯನ್ನು ಅಂಗೀಕರಿಸುವಂತೆ ಹೇಳು' ಎಂಬುದಾಗಿ ಅಕೃತವ್ರಣನು ಹೇಳಿದನು.

ಕೂಡಲೇ ಪರಶುರಾಮನು, ಸರಸ್ವತೀ ನದೀತೀರದಲ್ಲಿ ಬಿಡಾರ ಮಾಡಿದನು ಅನೇಕ ಬ್ರಾಹ್ಮಣರು ಸೇರಿದರು. ಭೀಷ್ಮನಿಗೆ ಕರೆ ಹೋಯಿತು. ಹಸ್ತಿನಾವತಿಯಿಂದ ಋತ್ವಿಕ್ಕುಗಳು, ಪುರೋಹಿತರು, ರಾಜರು ಎಲ್ಲರೂ ಭೀಷ್ಮನನ್ನು ಮುಂದಿಟ್ಟುಕೊಂಡು ಬಂದರು. ಎಲ್ಲರೂ

ಪರಶುರಾಮನನ್ನು ಆರಾಧಿಸಿದರು. ಪೂಜೆಗಳೆಲ್ಲ ಮುಗಿದುವು. ಆಮೇಲೆ ಪರಶುರಾಮನು, 'ಭೀಷ್ಮಾ! ಅಂಬೆಯಲ್ಲಿ ನಿನಗೆ ಮೋಹವಿಲ್ಲದಿರುವಾಗ ಆವಳನ್ನೇಕೆ ಎಳೆದೊಯ್ದೆ? ಆಮೇಲೆ ಅವಳನ್ನು ಕೈಬಿಟ್ಟುದೇಕೆ? ನಿನ್ನಿಂದ ಅವಳು ಭ್ರಷ್ಟಳಾದಳಲ್ಲವೇ? ಅವಳಿಗೆ ನಿನ್ನನ್ನು ಬಿಟ್ಟರೆ ಬೇರೆ ಗತಿಯೇ ಇಲ್ಲ. ಅವಳನ್ನು ನೀನು ವರಿಸು. ಅವಳು ಸ್ವಧರ್ಮವನ್ನು ರಕ್ಷಿಸಿಕೊಳ್ಳುವಂತಾಗಲಿ' ಎಂದನು.

ತಾನು ಸಾಲ್ವರಾಜನನ್ನು ಮನಸ್ಸಿನಲ್ಲಿ ವರಿಸಿರುವುದಾಗಿ, ಹೇಳಿದ ಮೇಲೆ ಅವಳನ್ನು ಇನ್ಯಾರು ತಾನೆ ವರಿಸುವರು? ಭಯದಿಂದಾಗಲಿ, ಕನಿಕರದಿಂದಾಗಲಿ, ಇನ್ಯಾವ ಅಪೇಕ್ಷೆಯಿಂದಾಗಲಿ, ತಾನು ತನ್ನ ಧರ್ಮ ಬಿಡತಕ್ಕವನಲ್ಲವೆಂದೂ, ಕ್ಷತ್ರಿಯ ಧರ್ಮವನ್ನು ತಾನು ಪಾಲಿಸಲೇ ಬೇಕೆಂದೂ ಭೀಷ್ಮನು ಉತ್ತರವಿತ್ತನು.

ಇದನ್ನು ಕೇಳಿ ಪರಶುರಾಮನಿಗೆ ಮಹತ್ತರ ಕೋಪವುಂಟಾಯಿತು. ಕಣ್ಣು ಕೆಂಪಾಯಿತು. ಮುಖವರಳಿತು. 'ಎಲಾ! ಭೀಷ್ಮಾ! ನನ್ನ ಮಾತನ್ನು ಕೇಳದಿದ್ದರೆ, ನಿನ್ನನ್ನೂ ನಿನ್ನ ಪರಿವಾರವನ್ನೂ ಈಗಲೇ ನಾಶ ಮಾಡಿಬಿಡುವೆನು' ಎಂದನು. ಕೂಡಲೇ ಭೀಷ್ಮನು ಪರಶುರಾಮನ ಪಾದವಮುಟ್ಟಿ ನಮಸ್ಕಾರಮಾಡಿ, 'ಆಚಾರ್ಯ! ನಿಷ್ಕಾರಣವಾಗಿ ಕೋಪಿಸಬೇಡ. ನಾನು ನಿನ್ನ ಶಿಷ್ಯ. ಬಾಲ್ಯದಲ್ಲಿ ನೀನೇ ನನಗೆ ಅಸ್ತ್ರವಿದ್ಯೆ ಹೇಳಿಕೊಟ್ಟಿರುವೆ' ಎಂದನು.

'ಭೀಷ್ಮಾ! ನೀನು ನನ್ನನ್ನು ಗುರು ಎನ್ನುವೆ. ವಿನಯದಿಂದ ವರ್ತಿಸುವೆ. ಆದರೆ ನನ್ನ ಇಷ್ಟಕ್ಕೆ ವಿರೋಧವಾಗಿ ವರ್ತಿಸುತ್ತಿರುವೆ. ನಿನಗೆ ನನ್ನಲ್ಲಿ ನಿಜವಾದ ಗುರುಭಾವ ಇದ್ದರೆ, ನನಗೆ ಪ್ರಿಯವನ್ನುಂಟು ಮಾಡಬೇಡವೇ? ನನ್ನ ಇಷ್ಟದಂತೆ ನೀನು ಅಂಬೆಯನ್ನು ವರಿಸು. ಅವಳು ನನ್ನನ್ನು ಶರಣುಹೊಂದಿದ್ದಾಳೆ. ನಿನ್ನಿಂದ ಭ್ರಷ್ಟಳಾದ ಅವಳಿಗೆ ಬೇರೆ ಗತಿಯಿಲ್ಲ. ಹೀಗೆ ನಡೆಯದಿದ್ದರೆ ನನಗೆ ಶಾಂತಿ ಇರದು' ಎಂದು ಪರಶುರಾಮನು ಹೇಳಿದನು.

ಭೀಷ್ಮನು ಈ ಮಾತುಗಳಿಗೆ ಮರುಳಾಗುವನೇ? ವೀರಕ್ಷತ್ರಿಯನಲ್ಲವೇ ಅವನು? 'ಓ! ಬ್ರಹ್ಮರ್ಷೀ! ಏತಕ್ಕೆ ವೃಥಾ ಶ್ರಮಪಡುವೆ.

ನಿನ್ನ ಉದ್ದೇಶ ಸರ್ವಥಾ ಸಾಧುವಲ್ಲ. ಇನ್ನೊಬ್ಬ ಪುರುಷನಲ್ಲಿ ಮನಸ್ಸಿಡೆ ಎಂದು ಹೇಳಿದ ಸ್ತ್ರೀಯನ್ನು ಯಾರು ತಾನೆ ವರಿಸುವರು ಲೋಕದಲ್ಲಿ? ನಿನ್ನಲ್ಲಿ ನನಗೆ ಗುರುಭಾವನೆ ಇರುವುದರಿಂದಲೇ ಇಷ್ಟು ವಿಧವಾಗಿ ನಾನು ಪ್ರಾರ್ಥಿಸಿದುದು. ನಾನು ಎಂದಿಗೂ ನನ್ನ ಧರ್ಮವನ್ನು ಬಿಡೆನು. ಪ್ರಸನ್ನನಾಗಬೇಕೆಂದು ಈಗಲೂ ನಿನ್ನನ್ನು ಬೇಡುವೆನು. ಗುರುವಾದುದ ರಿಂದ ನಿನ್ನಲ್ಲಿ ಇಷ್ಟು ಗೌರವ ತೋರಿಸಿದ್ದೇನೆ. ನೀನು ತಪೋಧನ ನಾದುದರಿಂದ ನಿನ್ನ ಕಠಿಣ ಮಾತುಗಳನ್ನು ನಾನು ಇದುವರೆವಿಗೆ ಸಹಿಸ ಬೇಕಾಯಿತು. ಇಷ್ಟರ ಮೇಲೆ ನಿನ್ನ ಇಷ್ಟಬಂದಂತೆ ಮಾಡಬಹುದು. ಒಂದುಪಕ್ಷ ನಿನ್ನೊಡನೆ ಯುದ್ಧಮಾಡಿ ನಿನ್ನನ್ನು ಕೊಲ್ಲಬೇಕಾದ ಸಂದರ್ಭ ಬಂದರೂ ಕೂಡ, ಅದರಿಂದ ನನಗೆ ಬ್ರಹ್ಮಹತ್ಯಾದೋಷ ಬರುವುದಿಲ್ಲ. ಏಕೆಂದರೆ, ನಾನು ಕ್ಷತ್ರಿಯ ಧರ್ಮವನ್ನು ಪಾಲಿಸುತ್ತಿದ್ದೇನೆ. ಯುದ್ಧ ಮಾಡಬೇಕೆಂಬ ಆಶೆ ಇದ್ದರೆ, ಆಚಾರ್ಯಾ! ನಡೆ ಕುರುಕ್ಷೇತ್ರಕ್ಕೆ. ಯಾವ ಸ್ಥಳದಲ್ಲಿ ಕ್ಷತ್ರಿಯರನ್ನು ನೀನು ಕೊಂದು, ನಿನ್ನ ತಂದೆಗೆ ತೃಪ್ತಿ ಯನ್ನುಂಟುಮಾಡಲು ಅವರ ರಕ್ತದಲ್ಲಿ ತರ್ಪಣಮಾಡಿದೆಯೋ, ಅದೇ ಸ್ಥಳದಲ್ಲಿ ಕ್ಷತ್ರಿಯನಾದ ನಾನು ನಿನ್ನನ್ನು ಕೊಂದು, ನಿನ್ನಿಂದ ಮಡಿದ ಕ್ಷತ್ರಿಯರಿಗೆ ತೃಪ್ತಿಯುಂಟಾಗುವಂತೆ ಮಾಡುವೆನು. ನೀನು ಹಿಂದೆ ಕ್ಷತ್ರಿಯರನ್ನು ಕೊಲ್ಲಲು ಇಪ್ಪತ್ತೊಂದು ಸಲ ಭೂಪ್ರದಕ್ಷಿಣೆ ಮಾಡಿದೆ ಎಂದು ಹೇಳುವೆ. ಆದರೆ ಅಂದು ಭೀಷ್ಮನಾಗಲಿ ಅಥವ ಅವನಂತಹ ಕ್ಷತ್ರಿಯನಾಗಲಿ ಹುಟ್ಟಿರಲಿಲ್ಲ. ನಿನ್ನ ಯುದ್ಧದ ಕೆಚ್ಚನ್ನು ಅಡಗಿಸುವುದ ಕ್ಕಾಗಿಯೇ ಭೀಷ್ಮನಾದ ನಾನು ಹುಟ್ಟಿರುವೆನು' ಎಂದು ಭೀಷ್ಮನು ಉತ್ತರಕೊಟ್ಟನು.

ಪರಶುರಾಮನು ನಗುತ್ತಾ, 'ಭೀಷ್ಮಾ! ದೈವವಶಾತ್ ಯುದ್ಧಕ್ಕೆ ಸಮ್ಮತಿಸಿದೆಯಲ್ಲಾ; ಅಷ್ಟೇ ಸಾಕು, ನಡೆ ಕುರುಕ್ಷೇತ್ರಕ್ಕೆ. ನನ್ನ ಬಾಣ ದಿಂದ ಹತನಾಗುವೆ, ನಿನ್ನ ಮೃತದೇಹಕ್ಕೆ ಹದ್ದು ಕಾಗೆಗಳು ಮುತ್ತುವು ದನ್ನು ನಿನ್ನ ತಾಯಿ ಗಂಗಾದೇವಿಯು ನೋಡಲಿ' ಎಂದನು.

ತಾಯಿಯಾದ ಸತ್ಯವತೀದೇವಿಯ ಆಶೀರ್ವಾದ ಪಡೆದು ಭೀಷ್ಮನು ಬಿಳೀ ಕುದುರೆ ಕಟ್ಟಿದ ಬೆಳ್ಳಿಯ ರಥವನ್ನೇರಿ, ಶಸ್ತ್ರ, ಸಾಮಗ್ರಿ, ಆಸನ,

ಹೊದ್ದಿಕೆ ಎಲ್ಲವನ್ನೂ ಸಿದ್ಧಪಡಿಸಿದನು. ಬಿಳಿಯ ಕವಚ, ಬಿಳಿಯ ಪಂಚಿ, ಬಿಳಿಯ ತಲೆಪಾಗು, ಬಿಳಿಯ ಕೊಡೆ, ಬಿಳುಪು ಬೀಸಣಿಗೆ—ಹೀಗೆ ಎಲ್ಲ ಸ್ವಚ್ಛ ಬಿಳುಪಿನಿಂದ ಕೂಡಿ ಭೀಷ್ಮನು ಕುರುಕ್ಷೇತ್ರಕ್ಕೆ ಬಂದನು. ಅಷ್ಟರಲ್ಲಿ ಪರಶುರಾಮನೂ ಅಲ್ಲಿಗೆ ಬಂದು ಸೇರಿದನು.

ಈ ಮಹಾರಥಿಕರ ಯುದ್ಧವನ್ನು ನೋಡಲು ಇಂದ್ರಾದಿ ದೇವತೆಗಳೆಲ್ಲ ನೆರೆದರು. ಗಂಗಾದೇವಿಯು ಮೂರ್ತಿಮತ್ತಾಗಿ ಬಂದಳು ಅಲ್ಲಿಗೆ. ಭೀಷ್ಮನನ್ನು ಕುರಿತು, 'ಕುಮಾರಾ! ಇದೇನು? ಗುರುವಿನೊಡನೆ ಯುದ್ಧಮಾಡುವುದೇ? ಕ್ಷತ್ರಿಯರನ್ನು ಧ್ವಂಸಮಾಡಿದವನು ಅವನು. ರುದ್ರನಿಗೆ ಸಮಾನವಾದ ಪರಾಕ್ರಮ ಅವನದು. ಯುದ್ಧ ಬೇಡ. ನಾನೇ ಅವನನ್ನು ಪ್ರಾರ್ಥಿಸುವೆನು' ಎಂದಳು. ತನ್ನ ಮಗನಾದ ಭೀಷ್ಮನೊಡನೆ ಯುದ್ಧ ಬೇಡವೆಂದು ಪರಶುರಾಮನನ್ನು ಪ್ರಾರ್ಥಿಸುವಳು. ಆದರೆ ಅವಳ ಮಾತೇನೂ ನಡೆಯಲಿಲ್ಲ. ಯುದ್ಧ ಪ್ರಾರಂಭವೇ ಆಯಿತು.

'ಆಚಾರ್ಯಾ! ನಾನು ರಥದಲ್ಲಿ ಕುಳಿತಿರುವುದು. ನೀನು ಭೂಮಿಯ ಮೇಲೆ ನಿಂತು ಯುದ್ಧ ಮಾಡುವುದು ಸರಿಯಲ್ಲ. ಸರಿಯಾದ ರೀತಿಯಲ್ಲಿ ಯುದ್ಧ ಮಾಡಬೇಡವೇ?' ಎಂದನು ಭೀಷ್ಮ.

'ಭೀಷ್ಮಾ! ನನಗೆ ಭೂಮಿಯೇ ರಥವು. ವೇದಗಳೇ ಕುದುರೆ. ಗಾಳಿಯೇ ಸಾರಥಿ. ಗಾಯತ್ರಿ, ಸರಸ್ವತಿ, ಸಾವಿತ್ರಿ ಮುಂತಾದ ವೇದ ಮಾತೆಗಳು ರಕ್ಷಾ ಕವಚ' ಎಂದು ಹೇಳಿ ಬಾಯಿಬಿಟ್ಟ ಕೂಡಲೇ ಉತ್ತಮ ಅಶ್ವಗಳಿಂದ ಬಿಗಿಯಲ್ಪಟ್ಟ, ಚಂದ್ರ ಸೂರ್ಯ ಗುರುತುಳ್ಳ ರಥದಲ್ಲಿ ಪರಶುರಾಮನು ಕುಳಿತಿದ್ದನು. ಅಕೃತವ್ರಣನು ಸಾರಥಿಯಾಗಿದ್ದನು. ಅಷ್ಟರಲ್ಲಿ ಭೀಷ್ಮನು ರಥವನ್ನು ನಿಲ್ಲಿಸಿ, ಕಾಲುನಡಿಗೆಯಲ್ಲಿ ಪರಶುರಾಮನ ಬಳಿಗೆ ಬಂದು ನಮಸ್ಕರಿಸಿ, ವಿನಯವಾಗಿ "ಆಚಾರ್ಯ! ಗುರುವಾದ ನಿನ್ನೊಡನೆ ಯುದ್ಧ ಮಾಡಬೇಕಾದ ಸಂದರ್ಭ ಬಂದಿದೆ. ನೀನು ನನಗೆ ಸಮನಾಗಿಯಾದರೂ ಇರು, ಅಥವಾ ಮೇಲಾಗಿಯೇ ಇರು. ನೀನು ಧರ್ಮಶೀಲ, ವಿದ್ಯಾವೈಭವ, ನನ್ನ ಗುರು, ಶಿಷ್ಯನಾದ ನಾನು ಇಗೋ ನಮಸ್ಕರಿಸುತ್ತೇನೆ. ಜಯಶೀಲನಾಗುವಂತೆ ಹರಸು' ಎಂಬುದಾಗಿ ಭೀಷ್ಮನು ನುಡಿದನು.

'ಭೀಷ್ಮಾ! ಶ್ರೇಯಸ್ಸನ್ನು ಬಯಸತಕ್ಕವನು ಇಂತ ಸಮಯ ದಲ್ಲಿ, ತನ್ನ ಕರ್ತವ್ಯವನ್ನು ಮರೆಯಬಾರದು, ಇದು ಧರ್ಮ. ನನ್ನನ್ನು ಸತ್ಕರಿಸುವುದಕ್ಕಾಗಿ ನೀನು ಬಂದುದು ನ್ಯಾಯ. ತನಗಿಂತ ದೊಡ್ಡವ ರಾದವರಲ್ಲಿ ಯುದ್ಧ ಮಾಡಬೇಕಾದಾಗ ಅನುಸರಿಸಬೇಕಾದ ಧರ್ಮ ಇದು. ನೀನು ಬಾರದಿದ್ದರೆ, ಅವಿಧೇಯನೆಂದು ನಿನ್ನನ್ನು ಶಪಿಸುತ್ತಿದ್ದೆ, ಹೋಗು. ಯುದ್ಧ ಮಾಡು. ನಿನ್ನನ್ನು ಜಯಿಸುವುದಕ್ಕೆ ಬಂದ ನಾನು ನಿನಗೆ ಜಯವನ್ನು ಹೇಗೆ ತಾನೇ ಕೋರಲಿ. ನಿನ್ನ ನಡತೆಗೆ ಮೆಚ್ಚಿದೆ' ಎಂದು ಪರಶುರಾಮನು ಭೀಷ್ಮನನ್ನು ಪ್ರಶಂಸೆ ಮಾಡಿದನು.

'ಎಲೈ! ತಪಸ್ವೀ! ಮಹಾತ್ಮಾ! ಧರ್ಮವನ್ನು ಕಾಪಾಡುವುದ ಕ್ಕಾಗಿ ನಾನು ಯುದ್ಧ ಮಾಡಬೇಕಾಗಿದೆ. ನೀನು ಮರ್ಯಾದೆ ಮೀರಿ ದರೂ, ನಾನು ನಿನ್ನನ್ನು ಗುರುವೆಂದು ಕೊಂಡಾಡುವೆನು. ನಿನ್ನ ಶರೀರ ದಲ್ಲಿರುವ ವೇದಗಳನ್ನು ನಿನ್ನ ಬ್ರಹ್ಮತೇಜಸ್ಸನ್ನು ನಿನ್ನ ಮಹಾ ತಪಸ್ಸನ್ನು ನಾನು ಗೌರವಿಸುವೆನು. ಇವುಗಳಿಗಾಗಿ ನಿನ್ನನ್ನು ಖಂಡಿತ ಹೊಡೆಯು ವುದಿಲ್ಲ. ಆದರೆ ನಿನ್ನ ಕ್ಷತ್ರಿಯ ಧರ್ಮಕ್ಕಾಗಿ ನಿನ್ನೊಡನೆ ಯುದ್ಧ ಮಾಡುವೆನು. ಬ್ರಾಹ್ಮಣನು ಧನುರ್ಬಾಣಗಳನ್ನು ಹಿಡಿದಾಗ ಕ್ಷತ್ರಿಯತ್ವ ವನ್ನು ಪಡೆಯುವನು. ಇಗೋ ನನ್ನ ಬಲವನ್ನು ನೋಡು' ಎಂದು ಹೇಳಿ ಭೀಷ್ಮನು ಬಾಣ ಪ್ರಯೋಗ ಮಾಡುವನು. ಅವೆಲ್ಲ ಪರಶುರಾಮನ ದೇಹದಲ್ಲಿ ನಾಟಿದುವು. ರಕ್ತ ಸುರಿಯಿತು. ಗೈರಿಕಾದಿ ಧಾತುಗಳು ಹೊರಟ ಪರ್ವತದಂತೆ ಕಾಣುತ್ತಿತ್ತು ಅವನ ದೇಹ. ವಸಂತ ಋತುವಿನ ಕೊನೆಯಲ್ಲಿ ಚಿಗುರಿದ ಅಶೋಕ ಮರದಂತೆ, ಹೂಬಿಟ್ಟ ಶಿಂಶುಪವೃಕ್ಷ ದಂತೆ ಪರಶುರಾಮನು ಕಂಡನು.

ಭೀಷ್ಮನ ಬಾಣಗಳಿಗೆ ಪ್ರತಿಯಾಗಿ ಪರಶುರಾಮನು ನೂರಾರು ಬಾಣಗಳನ್ನು ಬಿಟ್ಟನು. ಇವನ್ನೆಲ್ಲಾ ಭೀಷ್ಮನು ಎದುರಿಸಿದನು. ಸೂರ್ಯಾಗ್ನಿ ಮತ್ತು ಸರ್ಪಗಳಿಗೆ ಸಮಾನವಾದ ತೀಕ್ಷ್ಣ ಬಾಣಗಳನ್ನು ಭೀಷ್ಮನು ಬಿಟ್ಟನು. ಅವು ತಾಗಿದ ಕೂಡಲೆ ಅವನು ಮೂರ್ಛೆ ಹೊಂದಿ ದನು. ಭೀಷ್ಮನಿಗೆ ಮರುಕ ಹುಟ್ಟಿತು. 'ಛೀ! ಕ್ಷತ್ರಿಯ ಧರ್ಮವನ್ನು ಸುಡಬೇಕು. ಧರ್ಮಕ್ಕಾಗಿ ಅಲ್ಲವೇ ಈ ಪಾಪಕಾರ್ಯ ಮಾಡಬೇಕಾ

ಯಿತು. ಇವನೋ ಆಚಾರ್ಯನು, ಉತ್ತಮ ಬ್ರಾಹ್ಮಣನು, ಧರ್ಮಶೀಲನು, ಮಹಾ ತಪಸ್ವಿ, ಅಂತಹವನ ಮೇಲೆ ಬಾಣ ಬಿಟ್ಟು ನೋಯಿಸಿದೆನಲ್ಲಾ' ಎಂದು ಭೀಷ್ಮನು ಬಹುವಾಗಿ ಪರಿತಪಿಸಿದನು. ಅಷ್ಟರಲ್ಲಿ ರಾತ್ರಿಯಾಗಿ ಯುದ್ಧ ನಿಂತಿತು.

ಮಾರನೆಯ ದಿನ ಯುದ್ಧ ಪ್ರಾರಂಭವಾಯಿತು. ಅನೇಕ ದಿವ್ಯಾಸ್ತ್ರಗಳ ಪ್ರಯೋಗವಾಯಿತು. ಒಂದೊಂದು ಅಸ್ತ್ರವನ್ನು ಮತ್ತೊಂದು ದಿವ್ಯಾಸ್ತ್ರದಿಂದ ನಿವಾರಿಸುತ್ತ ಬರಲಾಯಿತು. ಪರಶುರಾಮನು ಅತಿಯಾಗಿ ಕೋಪಗೊಂಡು, ಭೀಷ್ಮನ ಮೇಲೆ ಬಲವಾದ ತೀಕ್ಷ್ಣ ಬಾಣಗಳನ್ನು ಬಿಟ್ಟನು. ಅವು ತಾಕಿದ ಕೂಡಲೆ ಭೀಷ್ಮನು ಪ್ರಜ್ಞೆ ತಪ್ಪಿ ರಥದಲ್ಲಿ ಕುಳಿತುಬಿಟ್ಟನು. ಸ್ವಲ್ಪ ಹೊತ್ತಿನಲ್ಲಿ ಎಚ್ಚರವಾಯಿತು. ಕೂಡಲೆ ಮೃತ್ಯುಸಮವಾದ ಇನ್ನೊಂದು ಬಾಣವನ್ನು ಪರಶುರಾಮನ ಮೇಲೆ ಭೀಷ್ಮನು ಬಿಡಲು, ಅವನು ಮೂರ್ಛೆ ಹೊಂದಿದನು. ಅಲ್ಲಿದ್ದ ಋಷಿಗಳು ಅವನಿಗೆ ಶೈತ್ಯೋಪಚಾರ ಮಾಡಿದರು. ಎಚ್ಚರವಾದ ಕೂಡಲೇ ಪರಶುರಾಮನು ಅತ್ಯಂತ ಕೋಪದಿಂದ ಭೀಷ್ಮನ ಮೇಲೆ ತೀವ್ರ ಬಾಣಗಳನ್ನು ಬಿಟ್ಟನು. ಬಾಣಗಳು ಭೀಷ್ಮನನ್ನು ರಥದಿಂದ ಕೆಳಕ್ಕೆ ತಳ್ಳಿ ಭೂಮಿಗೆ ನಾಟಿದುವು. ಭೀಷ್ಮನು ಹತನಾದನೆಂದು ತಿಳಿದು ಪರಶುರಾಮನು ಅಟ್ಟಹಾಸ ಮಾಡಿದನು. ಆದರೆ ದಿವ್ಯತೇಜಸ್ಸಿನ ಎಂಟು ಜನ ಬ್ರಾಹ್ಮಣರು ಭೀಷ್ಮನನ್ನು ಎತ್ತಿ ಕೂರಿಸಿ ಕ್ಷೇಮವಾಗಲೆಂದು ಅವನನ್ನು ಹರಸಿದರು.

ಭೀಷ್ಮನು ಮೇಲೆದ್ದು ಆಯಾಸ ಪರಿಹಾರ ಮಾಡಿಕೊಳ್ಳುವಷ್ಟರಲ್ಲಿ ಗಂಗಾದೇವಿಯು ಬಂದು ಅವನ ರಥಕ್ಕೆ ಸಾರಥಿಯಾದಳು. ಭೀಷ್ಮನು ತನ್ನ ತಾಯಿಗೂ, ಅಷ್ಟವಸುಗಳಿಗೂ ವಂದಿಸಿ, ಯುದ್ಧ ಪ್ರಾರಂಭಿಸಿದನು. ಅತಿ ದಾರುಣ ಬಾಣಗಳನ್ನು ಪರಶುರಾಮನ ಎದೆಗೆ ಗುರಿ ಇಟ್ಟು ಹೊಡೆದನು. ಅವು ತಾಕಿದ ಕೂಡಲೇ ಅವನು ನೊಂದು ನೆಲದ ಮೇಲೆ ಬಿದ್ದನು. ಸಿಡಿಲು ಮಿಂಚುಗಳು ತಲೆದೋರಿದವು. ಉಲ್ಕೆಗಳು ಎದ್ದುವು, ಬಿರುಗಾಳಿ ಬೀಸಿತು, ಭೂಮಿ ನಡುಗಿತು, ದಿಕ್ಕು ದಿಕ್ಕುಗಳಲ್ಲಿ ಉರಿ ಕಾಣಿಸಿತು. ಇಷ್ಟೆಲ್ಲ ಆಗುವುದರೊಳಗೆ, ಪರಶುರಾಮನು ಚೇತರಿಸಿಕೊಂಡು ಎದ್ದನು.

ಮಹಾ ಕೋಪದಿಂದ, ದೊಡ್ಡ ಧನುಸ್ಸನ್ನು ಎತ್ತಿ ಭೀಷ್ಮನನ್ನು ಹೊಡೆಯು ವುದಕ್ಕೆ ಮಹಾ ಬಾಣವೊಂದನ್ನು ಸಿದ್ಧಪಡಿಸಿದನು. ಅಷ್ಟರಲ್ಲಿ ಮಹರ್ಷಿ ಗಳು ಬೇಡವೆಂದು ತಡೆದರು. ಅವರ ಮಾತನ್ನು ನಿರಾಕರಿಸದೆ ಪರಶು ರಾಮನು ಅದನ್ನು ಹಾಗೆಯೇ ಉಪಶಮನ ಮಾಡಿದನು.

ಹೀಗೆ ಪರಶುರಾಮ – ಭೀಷ್ಮರ ಯುದ್ಧವು ಇಪ್ಪತ್ತೊಂದು ದಿನ ನಡೆಯಿತು. ಯಾರಿಗೂ ಜಯ ಲಭಿಸಲಿಲ್ಲ. ಒಂದು ರಾತ್ರಿ ಮಲಗು ವಾಗ ಭೀಷ್ಮನು, 'ನಾನು ಪರಶುರಾಮನನ್ನು ಜಯಿಸುವುದು ನಿಜವಾದರೆ ದೇವತೆಗಳು ನನಗೆ ಅನುಗ್ರಹಿಸಲಿ' ಎಂದು ಪ್ರಾರ್ಥಿಸಿದನು. ಅಂದಿನ ಸ್ವಪ್ನದಲ್ಲಿ ಎಂಟು ಮಂದಿ ದಿವ್ಯ ಪುರುಷರು ಕಾಣಿಸಿಕೊಂಡು 'ಗಂಗಾಪುತ್ರ! ನೀನು ಹೆದರಬೇಡ. ನಿನ್ನ ಭಯಕ್ಕೆ ಕಾರಣವಿಲ್ಲ. ನೀನು ನಮ್ಮ ಅಂಶ ವಲ್ಲವೇ ? ನಾವು ನಿನ್ನನ್ನು ರಕ್ಷಿಸುವೆವು. ನಾಳಿನ ಯುದ್ಧದಲ್ಲಿ ನಿನ್ನ ಪೂರ್ವಜನ್ಮದಲ್ಲಿ ತಿಳಿದಿದ್ದ ಅಸ್ತ್ರಮಂತ್ರವು ತಾನಾಗಿ ನಿನ್ನ ನೆನಪಿಗೆ ಬರುವುದು. ನಿನಗೆ ಪ್ರಿಯವಾದ ಪ್ರಸ್ವಾಪನಾಸ್ತ್ರದಿಂದ, ರಾಮನನ್ನು ನೀನು ಜಯಿಸುವೆ. ರಾಮನು ಅದರಿಂದ ಸಾಯುವುದಿಲ್ಲ. ನಿನಗೆ ಬ್ರಹ್ಮಹತ್ಯಾ ದೋಷವೂ ಬರುವುದಿಲ್ಲ. ರಾಮನು ಮೂರ್ಛೆ ಬೀಳುವನು. ಅವನು ಮರಣವಿಲ್ಲದವನು. ಮೂರ್ಛೆ ಬಿದ್ದವನನ್ನು ಸಂಭೋಧನಾಸ್ತ್ರ ದಿಂದ ನೀನೇ ಎಬ್ಬಿಸು' ಎಂದು ಹೇಳಿದರು.

ರಾತ್ರಿ ಕಳೆದು ಬೆಳಗಾಯಿತು. ಪುನಃ ಯುದ್ಧ ಪ್ರಾರಂಭವಾಯಿತು. ಪರಶುರಾಮನು ಭೀಷ್ಮನ ಮೇಲೆ ಬಾಣವರ್ಷ ಕರೆದನು. ಅವುಗಳನ್ನು ಭೀಷ್ಮನು ನಿವಾರಿಸಿದನು. ಪುನಃ ಒಂದು ಶಕ್ತಿಯನ್ನು ಪ್ರಯೋಗಿಸಿದನು. ಅದು ಭೀಷ್ಮನ ಭುಜಕ್ಕೆ ತಗುಲಿತು. ರಕ್ತ ಸುರಿಯಲು ಪ್ರಾರಂಭ ವಾಯಿತು. ಸ್ವಲ್ಪ ಕಾಲವಾದ ಮೇಲೆ ಭೀಷ್ಮನು ಚೇತರಿಸಿಕೊಂಡು ಕಾಲಾಂತಕನಿಗೆ ಸಮನಾದ ಬಾಣವೊಂದನ್ನು ರಾಮನಮೇಲೆ ಪ್ರಯೋಗಿಸಿ ದನು. ಅದರಿಂದ ಪರಶುರಾಮನು ಮೂರ್ಛೆ ಹೊಂದಿದನು. ಸಾರಥಿಯಾದ ಅಕೃತವ್ರಣನು ಅವನನ್ನು ಉಪಚರಿಸಿ ಎಬ್ಬಿಸಿದನು. ಅತ್ಯಂತವಾಗಿ ಕೋಪ ಗೊಂಡ ಪರಶುರಾಮನು, ಭೀಷ್ಮನ ಮೇಲೆ ಬ್ರಹ್ಮಾಸ್ತ್ರವನ್ನು ಬಿಟ್ಟನು. ಅದಕ್ಕೆ ಪ್ರತಿಯಾಗಿ, ಭೀಷ್ಮನೂ ಬ್ರಹ್ಮಾಸ್ತ್ರವನ್ನು ಬಿಟ್ಟನು. ಇವೆರಡು

ಅಸ್ತ್ರಗಳು ಆಕಾಶದಲ್ಲಿ ಒಂದನ್ನೊಂದು ತಾಡಿಸಿದುವು. ಇದರಿಂದ ದೊಡ್ಡ ಜ್ವಾಲೆಯೊಂದು ಹುಟ್ಟಿತು. ಇದರ ಕಾವನ್ನು ದೇವಗಂಧರ್ವರೆಲ್ಲ ತಾಳ ಲಾರದೆ ತತ್ತರಿಸಿಹೋದರು. ಭೀಷ್ಮನಿಗೆ ಆಗ ಪ್ರಸ್ವಾಪನಾಸ್ತ್ರವ ನೆನಪಿಗೆ ಬಂದಿತು. ಅಸ್ತ್ರವನ್ನು ಧನುಸ್ಸಿನಲ್ಲಿ ಸೇರಿಸಿ ಬಿಡಲು ಉದ್ಯುಕ್ತ ನಾದಾಗ, ದೇವಗಣ ಕೂಗಿಕೊಂಡಿತು. 'ಭೀಷ್ಮಾ! ಪರಶುರಾಮನು ಮಹಾ ತಪಸ್ವಿ, ಸರ್ವೋತ್ತಮನಾದ ಬ್ರಾಹ್ಮಣ, ಮಹಾದೇವನ ಪರಮ ಭಕ್ತ. ಮೇಲಾಗಿ ನಿನ್ನ ಗುರು. ಅಸ್ತ್ರವನ್ನು ಅವನ ಮೇಲೆ ಬಿಡಬೇಡ. ಗುರುವಿಗೆ ಅವಮಾನಪಡಿಸಬೇಡ' ಎಂದರು. ಕೂಡಲೆ ಅಷ್ಟವಸುಗಳೂ ನಾರದನೂ ಭೀಷ್ಮನಿಗೆ ಕಾಣಿಸಿಕೊಂಡು ದೇವಗಣ ಹೇಳಿದುದು ಸರಿ ಯೆಂದರು. ಇದನ್ನು ಕೇಳಿ ಭೀಷ್ಮನು ಅಸ್ತ್ರವನ್ನು ಹಾಗೆಯೇ ಉಪಶಮನ ಮಾಡಿದನು. ಬ್ರಹ್ಮಾಸ್ತ್ರವನ್ನು ಉದ್ದೀಪನಗೊಳಿಸಿದನು.

ಇದನ್ನು ಕಂಡು ಪರಶುರಾಮನಿಗೆ ಸಂತೋಷವಾಯಿತು. ಬುದ್ಧಿ ಹೀನನಾಗಿ ಭೀಷ್ಮನೊಡನೆ ಯುದ್ಧಕ್ಕೆ ಬಂದುದು ತಪ್ಪಾಯಿತೆಂದು ಗೋಚರವಾಯಿತು. ಅವನಿಗೆ ಅದೇ ಸಮಯದಲ್ಲಿ ಜಮದಗ್ನಿ ಋಷಿಯು ಕಾಣಿಸಿಕೊಂಡನು. 'ಕುಮಾರಾ ! ಪರಶುರಾಮ ! ನೀನು ಇಂತಹ ಸಾಹಸ ಕಾರ್ಯಕ್ಕೆ ಕೈಹಾಕಬಾರದಾಗಿತ್ತು. ಭೀಷ್ಮನು ಮಹಾ ಪರಾಕ್ರಮಿ. ಉತ್ತಮ ಕ್ಷತ್ರಿಯನು. ಯುದ್ಧವು ಅವನ ಧರ್ಮ. ನಮ್ಮಂತಹ ಬ್ರಾಹ್ಮಣರಿಗೆ ವೇದಾಧ್ಯಯನ, ಪೂಜೆ, ಧ್ಯಾನ, ವ್ರತ ನಿಯಮಾನುಷ್ಠಾನಗಳೇ ಮುಖ್ಯ ಧರ್ಮ. ಶಸ್ತ್ರಧಾರಣ ಮಾಡುವುದು ಇನ್ನು ನಿನಗೆ ತಕ್ಕುದಲ್ಲ. ಇದೇ ನಿನ್ನ ಕೊನೆಯ ಯುದ್ಧವಾಗಲಿ. ಇನ್ನು ಮುಂದೆ ಧನಸ್ಸು, ಬಾಣ, ಇತರ ಆಯುಧಗಳನ್ನೆಲ್ಲಾ ಬಿಟ್ಟು ತಪೋನಿರತನಾಗು' ಎಂದು ಹೇಳಿ ಅಂತರ್ಧಾನನಾದನು.

ನಾರದರು, ಗಂಗಾಮಾತೆ, ಇತರ ದೇವಗಣವೆಲ್ಲಾ ಅಲ್ಲಿ ಸೇರಿದರು. ನಾರದನು ಪರಶುರಾಮನನ್ನು ಕುರಿತು, 'ಭಾರ್ಗವಾ ! ರಾಮಾ !! ಎಷ್ಟೇ ಆದರೂ ನೀನು ಬ್ರಾಹ್ಮಣ, ನಿನ್ನ ಹೃದಯ ಬೆಣ್ಣೆಯಂತೆ ಮೃದುವಾಗಿರ ಬೇಕಲ್ಲವೇ ? ನಿನ್ನ ಧರ್ಮಕ್ಕೆ ತಕ್ಕಂತೆ, ನೀನು ಶಾಂತನಾಗು. ಯುದ್ಧ ದಿಂದ ಹಿಂತಿರುಗು. ಭೀಷ್ಮನನ್ನು ನೀನು ಕೊಲ್ಲಲಾರೆ. ನಿಮ್ಮಿಬ್ಬ

ಯುದ್ಧ ಲೋಕಕಂಟಕವಾಗದಿರಲಿ ' ಎಂದು ಹೇಳಿದನು. ಆಮೇಲೆ ಪರಶು ರಾಮನು ಧನುರ್ಬಾಣಗಳನ್ನು ಕೆಳಗಿಡುವನು. ಅಷ್ಟವಸುಗಳ ಅಪ್ಪಣೆ ಯಂತೆ ಭೀಷ್ಮನು ಪರಶುರಾಮನ ಪಾದ ಮುಟ್ಟಿ ನಮಸ್ಕಾರ ಮಾಡಿದನು. ' ಭೀಷ್ಮಾ! ಲೋಕದಲ್ಲಿ ನಿನಗೆ ಸಮಾನನಾದ ಕ್ಷತ್ರಿಯನಿನ್ನೊಬ್ಬನಿಲ್ಲ. ನಿನ್ನನ್ನು ಮೆಚ್ಚಿದೆ. ಯಶಸ್ವಿಯಾಗಿ ಬಾಳು, ಹೋಗಿ ಬಾ' ಎಂದು ಪರಶುರಾಮನು ಕಳುಹಿಸಿಕೊಟ್ಟನು.

ಪರಶುರಾಮನು ಭೀಷ್ಮನೊಡನೆ ಯುದ್ಧಮಾಡಿ ಹಿಂದಿನ ಕೀರ್ತಿ ಯನ್ನೆಲ್ಲಾ ಕಳೆದುಕೊಂಡನು. ಶ್ರೀರಾಮನ ಸಂದರ್ಶನದಿಂದ ತನ್ನ ತಪಸ್ಸಿನ ಫಲವನ್ನೆಲ್ಲಾ ನಾಶಮಾಡಿಕೊಂಡನು. ಆದುದರಿಂದ ಅವನಿಗೆ ಉಳಿದುದು ತಪಸ್ಸನ್ನಾಚರಿಸುವುದೊಂದೆ. ಈ ತಪಸ್ಸು ವ್ಯಕ್ತಿಲಾಭಕ್ಕಲ್ಲ, ಲೋಕಕಲ್ಯಾಣಾರ್ಥವಾಗಿ. ಮಹಾತ್ಮರು ಹೀಗೆ ಉತ್ತಮಮಾರ್ಗವನ್ನು ಹಿಡಿಯುವರು. ಪರಶುರಾಮನು ಧರ್ಮಸಂಸ್ಥಾಪನೆಗಾಗಿ ಧ್ಯಾನಾಸಕ್ತ ನಾದನು. ಮಹೇಂದ್ರ ಪರ್ವತದಲ್ಲಿ ತಪಸ್ಸಿನಲ್ಲಿ ನಿರತನಾಗಿರುವನು. ಭೂಮಂಡಲ ಇರುವವರೆಗೆ ಅವನಿರುವನು. ತನಗಾಗಿ ಅಲ್ಲ, ಮಾನವ ಜನಾಂಗದ ಹಿತಕ್ಕಾಗಿ. ಅವನೇ ಧನ್ಯ. ಅವನನ್ನು ಸ್ಮರಿಸಿ ಕೊಂಡಾಡಿದರೆ ಪುಣ್ಯ. ಆ ಪುಣ್ಯ ಎಲ್ಲರಿಗೂ ಬರಲಿ.

# ವಿಭೀಷಣ

ಪುಲಸ್ತ್ಯಬ್ರಹ್ಮನ ಮಗ ವಿಶ್ರವಸ್ಸು. ಇವನು ಮಹಾ ತಪಸ್ವಿ, ಉತ್ತಮ ಬ್ರಹ್ಮವಾದಿ. ಪ್ರಾರ್ಥನೆ, ಪೂಜೆ, ಧ್ಯಾನಾದಿಗಳನ್ನು ಮಾಡುತ್ತ ಅಗ್ನಿ ಕಾರ್ಯದಲ್ಲಿ ನಿರತನಾಗಿದ್ದನು. ದಂಡಕಾರಣ್ಯದಲ್ಲಿ ಅವನ ಆಶ್ರಮ ವಿತ್ತು. ಹೀಗಿರುವಾಗ ಸುಮಾಲಿ ಎಂಬ ರಾಕ್ಷಸನ ಮಗಳಾದ ಕೈಕಸಿ ಎಂಬ ಕನ್ಯೆಯು ಅವನನ್ನು ವರಿಸಲು ಆಶ್ರಮಕ್ಕೆ ಬಂದಳು. ಅವಳ ಇಷ್ಟವನ್ನು ಕಂಡು, ವಿಶ್ರವಸ್ಸು ಅವಳನ್ನು ವಿವಾಹ ಮಾಡಿಕೊಂಡನು. ಆದರೆ, ಅಕಾಲದಲ್ಲಿ ತನ್ನಲ್ಲಿಗೆ ಅವಳು ಬಂದದ್ದರಿಂದ ಅವಳಲ್ಲಿ ಹುಟ್ಟುವ ಮಕ್ಕಳು ದುಷ್ಟರೂ, ಕ್ರೂರಿಗಳೂ ಆಗುವರೆಂದು ವಿಶ್ರವಸ್ಸು ಹೇಳಿದನು. ಹೀಗಾಗುವುದನ್ನು ತಪ್ಪಿಸಬೇಕೆಂದು, ಕೈಕಸಿಯು ಬಹುವಾಗಿ ಬೇಡಿದಳು. ಆಗ ವಿಶ್ರವಸ್ಸು, ಹಣೆಯ ಬರಹವನ್ನು ತಪ್ಪಿಸಲು ಯಾರಿಂದಲೂ ಸಾಧ್ಯ ವಿಲ್ಲ. ಆದರೆ ಅವಳ ಕೊನೆಯ ಮಗನು ಧರ್ಮಿಷ್ಠನಾಗಿ, ಕುಲಕ್ಕೆ ಕೀರ್ತಿ ತರುವನೆಂದು ಸಮಾಧಾನಪಡಿಸಿದನು.

ಹೀಗಿರುವಾಗ ಕೆಲವು ಕಾಲದ ಮೇಲೆ ಕೈಕಸಿಗೆ ನಾಲ್ವರು ಮಕ್ಕಳಾದರು. ಮೊದಲನೆಯ ಮಗುವಿಗೆ ಹತ್ತು ತಲೆ, ಇಪ್ಪತ್ತು ಕೈಗಳು, ದೊಡ್ಡ ಕೋರೆಹಲ್ಲು, ಕಪ್ಪಾದ ಮೈ, ಭಯಂಕರ ರೂಪ. ಇವನೇ ದಶಗ್ರೀವ. ಎರಡನೆಯವನು ಕುಂಭಕರ್ಣ. ಮಹಾ ಬಲಾಢ್ಯ, ದೊಡ್ಡ ಆಕಾರದ ಮೈ. ಇವನಿಗಿಂತ ದೊಡ್ಡ ಆಕಾರವುಳ್ಳವರು ಲೋಕದಲ್ಲಿ ಇನ್ನಾರೂ ಇರಲಿಲ್ಲ. ಆಮೇಲೆ ಹೆಚ್ಚು ವಿಕಾರರೂಪಿಯಾದ ಮಗಳೊಬ್ಬಳು ಹುಟ್ಟಿದಳು. ಅವಳೇ ಶೂರ್ಪಣಖಿ. ಕೊನೆಯ ಮಗುವೇ ವಿಭೀಷಣ. ಇವನು ಹುಟ್ಟಿದಾಗ ಶುಭ ಸೂಚನೆಗಳಾದವು. ಆಕಾಶದಿಂದ ಪುಷ್ಪವೃಷ್ಟಿಯಾಯಿತು. ದೇವದುಂದುಭಿಗಳು ಮೊಳಗಿದವು. ಮೇಘ ಗಳು ಮಳೆ ಕರೆದವು. ಲೋಕ ಸುಭಿಕ್ಷವಾಯಿತು. ಪೈರು ಪಚ್ಚೆಗಳು ಚೆನ್ನಾಗಿ ಬೆಳೆದುವು.

ಈ ನಾಲ್ವರು ಮಕ್ಕಳು ಕಾಡಿನಲ್ಲಿ ಸುಖವಾಗಿ ಬೆಳೆಯುತ್ತಿದ್ದರು. ದಶಗ್ರೀವನು ಮಹಾ ಕ್ರೂರಿ. ಕಾಡಿನಲ್ಲಿ ಸಿಕ್ಕಿದವರನ್ನು ಹಿಡಿದು ಹಿಂಸಿಸುತ್ತಿದ್ದನು. ಕುಂಭಕರ್ಣನು ಮತ್ತನಾಗಿ ತನ್ನ ಭಯಂಕರ ರೂಪದಿಂದ ಎಲ್ಲರನ್ನೂ ಹೆದರಿಸುವನು. ಋಷಿಗಳನ್ನೂ, ಹೆಂಗಸರು ಮಕ್ಕಳನ್ನೂ ಹಿಡಿದು ತಿಂದುಬಿಡುತ್ತಿದ್ದನು. ವಿಭೀಷಣನು ಯಾವಾಗಲೂ ಧರ್ಮನಿರತ, ಜಿತೇಂದ್ರಿಯ:, ಆಹಾರ ನಿಯಮವುಳ್ಳವನಾಗಿದ್ದನು. ಗುರುಹಿರಿಯರಲ್ಲಿ ವಿಶೇಷವಾದ ಗೌರವ ಅವನಿಗೆ. ಆಶ್ರಮವಾಸಿಗಳಲ್ಲಿ ಅವನಿಗೆ ವಿಶೇಷ ಆದರವಿತ್ತು.

ಹೀಗಿರುವಾಗ ಕುಬೇರನು, ಒಂದು ದಿನ ತನ್ನ ತಂದೆಯಾದ ವಿಶ್ರವಸ್ಸನ್ನು ನೋಡಲು ಆಶ್ರಮಕ್ಕೆ ಬಂದನು. ಅವನ ಪುಷ್ಪಕ ವಿಮಾನ, ಅಟ್ಟಹಾಸ, ಐಶ್ವರ್ಯ ಇವನ್ನೆಲ್ಲಾ ಕಂಡು ಅವನ ಚಿಕ್ಕಮ್ಮ ಕೈಕಸಿಗೆ ಅಸೂಯೆಯಾಯಿತು. ತನ್ನ ಮಕ್ಕಳನ್ನು ಕರೆದು ಅವನನ್ನು ತೋರಿಸಿ, ತಾವೂ ಅವನಂತೆ ಉತ್ತಮ ಪದವಿ ಪಡೆಯಬೇಕೆಂದು ತಿಳಿಸಿದಳು. ಅವಳ ಸಲಹೆಯಂತೆ (ದಶಗ್ರೀವ) ರಾವಣ, ಕುಂಭಕರ್ಣರಿಬ್ಬರೂ ಬ್ರಹ್ಮನನ್ನು ಕುರಿತು ತಪಸ್ಸು ಮಾಡಲು ಕಾಡಿಗೆ ಓಡಿಹೋದರು. ಬ್ರಹ್ಮನನ್ನು ಮೆಚ್ಚಿಸಿ, ಐಶ್ವರ್ಯ, ಅಧಿಕಾರ, ರಾಜ್ಯಪ್ರಾಪ್ತಿಗೆ ಬೇಕಾದ ವರಗಳನ್ನು ಪಡೆದರು.

ವಿಭೀಷಣನೂ ಕೂಡ ತನ್ನ ಅಣ್ಣಂದಿರಂತೆ ತಪಸ್ಸು ಮಾಡಲು ಕಾಡಿಗೆ ಹೋದನು. ಐದು ಸಾವಿರ ವರ್ಷಕಾಲ ದೃಢನಿಯಮದಿಂದ ಒಂದೇ ಕಾಲಿನಲ್ಲಿ ನಿಂತು, ದೇವರ ಧ್ಯಾನ ಮಾಡಿದನು. ಮತ್ತೆ ಐದು ಸಾವಿರ ವರ್ಷಕಾಲ ಸೂರ್ಯನನ್ನು ಕುರಿತು ತಲೆಯೆತ್ತಿ, ತೋಳುಗಳನ್ನು ಮೇಲಕ್ಕೆ ನೀಡಿ, ಸೂರ್ಯೋಪಾಸನೆ ಮಾಡಿದನು. ಅವನ ತಪೋನಿಷ್ಠೆಗೆ ಬ್ರಹ್ಮನು ಬಹುವಾಗಿ ಮೆಚ್ಚಿದನು. 'ವತ್ಸಾ ! ವಿಭೀಷಣಾ ! ನಿನ್ನ ತಪಸ್ಸಿಗೆ ಮೆಚ್ಚಿದೆನು. ನಿನ್ನ ಭಕ್ತಿಗೆ ಪ್ರೀತನಾದೆನು. ಬೇಕಾದ ವರಗಳನ್ನು ಕೇಳು ಕೊಡುವೆನು' ಎಂದನು.

ಧರ್ಮಾತ್ಮನೂ, ಸತ್ಯಶೀಲನೂ ಆದ ವಿಭೀಷಣನು ಬ್ರಹ್ಮದೇವನ ಮುಂದೆ ಕೈಮುಗಿದು ನಿಂತು, 'ದೇವಾ ! ನೀನು ಲೋಕಗುರು, ಸೃಷ್ಟಿಕರ್ತ.

ನಿನ್ನಿಂದಲೇ ಎಲ್ಲವೂ ಈ ಜಗತ್ತಿನಲ್ಲಿ ಸಿದ್ಧಿಸುವುದು. ನಿನ್ನ ದರ್ಶನ ಮಾತ್ರದಿಂದಲೇ ನಾನು ಕೃತಾರ್ಥನಾದೆನು. ನೀನು ಕರುಣೆ ತೋರಿಸ ಬೇಕೆಂದಿದ್ದರೆ ನನಗೆ ಎಂತಹ ವಿಪತ್ತಿನಲ್ಲಿಯೂ ಧರ್ಮಬುದ್ಧಿ ಸ್ಥಿರವಾಗಿ ನಿಲ್ಲುವಂತೆ ಕೃಪೆಮಾಡು. ಯಾರಲ್ಲಿಯೂ ಹೋಗಿ ಕಷ್ಟಪಟ್ಟು ಕಲಿಯದ ಹಾಗೆಯೇ, ಎಲ್ಲ ಬ್ರಹ್ಮವಿದ್ಯೆಯು ನನಗೆ ಸಿದ್ಧಿಸುವಂತೆ ಹರಸು. ಧರ್ಮಮಾರ್ಗವನ್ನು ಎಂದೆಂದಿಗೂ ಬಿಡದ ಹಾಗೆ ಆಶೀರ್ವಾದ ಮಾಡು ಎಂದು ಬೇಡಿದನು.

ವಿಭೀಷಣನ ಮಾತುಗಳನ್ನು ಕೇಳಿ ಬ್ರಹ್ಮನಿಗೆ ಅತ್ಯಂತ ಸಂತೋಷ ವಾಯಿತು. 'ವತ್ಸಾ! ವಿಭೀಷಣಾ! ಧರ್ಮನಿಷ್ಠೆಯುಳ್ಳ ನೀನು ಧಾರ್ಮಿಕ ವರವನ್ನೇ ಬೇಡಿದೆ. ನಿನ್ನ ಇಷ್ಟದಂತೆಯೇ ಆಗಲಿ. ರಾಕ್ಷಸ ನಾಗಿ ಹುಟ್ಟಿದರೂ, ನಿನಗೆ ಅಧರ್ಮದಲ್ಲಿ ಬುದ್ಧಿ ಹುಟ್ಟದಿರಲಿ. ನಿನಗೆ ಯಾವಾಗಲೂ ಧರ್ಮಶ್ರದ್ಧೆ ಇರಲಿ. ನೀನು ಸ್ಥಿರಜೀವಿಯಾಗಿರು' ಎಂದು ಹರಸಿದನು.

ಆಮೇಲೆ ವಿಭೀಷಣನು ತನ್ನ ಅಣ್ಣನಾದ ರಾವಣನೊಡನೆ ಲಂಕಾ ಪಟ್ಟಣದಲ್ಲಿಯೇ ಇದ್ದನು. ಶೈಲೂಶನೆಂಬ ಗಂಧರ್ವರಾಜನ ಮಗಳಾದ ಸರಮೆಯೊಡನೆ ಅವನ ಮದುವೆ ಆಯಿತು. ಈ ಗಂಧರ್ವಕನ್ಯೆಯು ಹಿಮಾಲಯದಲ್ಲಿರುವ ಮಾನಸ ಸರೋವರದ ತೀರದಲ್ಲಿ ಹುಟ್ಟಿದವಳು. ಇವಳು ಹುಟ್ಟಿದಾಗ ಅಪಾರ ಮಳೆ ಆಯಿತಂತೆ. ಇದರ ದೆಸೆಯಿಂದ ಸರೋವರದ ನೀರು ಉಕ್ಕಲು ಪ್ರಾರಂಭವಾಯಿತು. ಆಗ ಇವಳ ತಾಯಿಯು, 'ಎಲೆ ಸರಸ್ಸೆ! ಉಕ್ಕಿ ಬರಬೇಡ. (ಸರೋವ)' ಎಂದು ಕೂಗಿದಳು. ಸರಸ್ಸು ಉಕ್ಕದೆ ಅಷ್ಟಕ್ಕೇ ನಿಂತಿತು. ಆಗ ಹುಟ್ಟಿದ ಮಗುವಿಗೆ ಸರಮೆ ಎಂದೇ ಹೆಸರಿಡಲಾಯಿತು. ಸರಮೆ ವಿಭೀಷಣನಿಗೆ ತಕ್ಕ ಪತ್ನಿ; ಮಹಾಧರ್ಮಿಷ್ಠೆ. ಅನುಕೂಲ ದಾಂಪತ್ಯ. ಹೀಗೆ ಪತ್ನಿ ಯೊಡನೆ ನಂದನವನದ ಗಂಧರ್ವನಂತೆ ವಿಭೀಷಣನು ಧರ್ಮಮಾರ್ಗ ಪ್ರವರ್ತಕನಾಗಿ, ಸದಾಚಾರಸಂಪನ್ನನಾಗಿ ಸಂತೋಷದಿಂದ ಇರುತ್ತಿದ್ದನು.

ಹನುಮಂತನು ಲಂಕೆಗೆ ಬಂದು ಅಶೋಕವನವನ್ನು ನಾಶಮಾಡಿ ದಾಗ, ರಾಕ್ಷಸರು ಅವನನ್ನು ಹಿಡಿದು ತಂದು ರಾವಣನ ಮುಂದೆ ನಿಲ್ಲಿಸು

ವರು. ಈ ಕಪಿಯನ್ನು ಕೊಲ್ಲುವಂತೆ ರಾವಣನು ಶಿಕ್ಷೆ ವಿಧಿಸುವನು. ಆಗ ಧರ್ಮಾಧರ್ಮಗಳನ್ನೂ, ಕಾರ್ಯಾಕಾರ್ಯಗಳನ್ನೂ ಚೆನ್ನಾಗಿ ತಿಳಿದ ವಿಭೀಷಣನು ದೂತವಧೆಯು ತಕ್ಕುದಲ್ಲವೆಂದು ಅಣ್ಣನಿಗೆ ನೀತಿಯನ್ನು ಹೇಳುವನು. ರಾಕ್ಷಸ ರಾಜನೂ, ಯುಕ್ತ ವಿವೇಕಿಯೂ ಆದ ರಾವಣನು ಧರ್ಮವಿರುದ್ಧ ಕಾರ್ಯವನ್ನು ನಡೆಸಬಾರದೆಂದು ಸೂಚಿಸುವನು. ದೂತನಾಗಿ ಬಂದಿರುವವನಿಗೆ ಯಾವ ಸ್ವಾತಂತ್ರ್ಯವೂ ಇಲ್ಲ. ಅವನು ಪರಾಧೀನ. ಅವನನ್ನು ಒಂದುಪಕ್ಷ ಕೊಂದರೆ ಈ ಸಮಾಚಾರವನ್ನಾದರೂ ರಾಮನಿಗೆ ತಿಳಿಸಲು ಯಾರಿದ್ದಾರೆ? ಅವನು ಇಲ್ಲಿಗೆ ಬರುವುದು ಹೇಗೆ? ರಾಮಲಕ್ಷ್ಮಣರು ಇಲ್ಲಿಗೆ ಬಂದರಲ್ಲವೇ ಯುದ್ಧವಾಗುವುದು? ಯುದ್ಧದಲ್ಲಿ ವಿಶೇಷ ಪ್ರೀತಿಯುಳ್ಳ ರಾವಣನು, ಮುಂದೆ ಯುದ್ಧದ ಅವಕಾಶವನ್ನು ತಪ್ಪಿಸುವುದು ಸರಿಯೇ? ಹೀಗೆ ಯುಕ್ತಿಯುಕ್ತವಾದ ಮಾತುಗಳಿಂದ, ಹನುಮಂತನ ವಧೆಯನ್ನು ನಿಲ್ಲಿಸುವನು.

ಕೆಲವು ಕಾಲಾನಂತರ, ರಾಮಲಕ್ಷ್ಮಣರು, ವಾನರ ವೀರರ ಸಮೇತ ಲಂಕಾಪಟ್ಟಣದ ಹತ್ತಿರ ಪಾಳೆಯ ಬಿಟ್ಟು ಯುದ್ಧಕ್ಕೆ ಸಿದ್ಧರಾಗುತ್ತಿದ್ದರು. ಆಗ ರಾವಣನು, ತನ್ನ ಸಮೂಹವನ್ನು ಕರೆದು ಮಂತ್ರಾಲೋಚನೆ ನಡೆಸುವನು. ಆ ಸಭೆಯಲ್ಲಿ ನೆರೆದಿರುವ ರಾಕ್ಷಸರನ್ನು ಕುರಿತು ವಿಭೀಷಣನು ಹೀಗೆ ಹೇಳುವನು. "ಅಪ್ಪಾ! ರಾಕ್ಷಸವೀರರೆ! ನಾವು ಹೀಗೆ ಆತುರ ಪಡಬಾರದು. ಸಾಮ, ದಾನ, ಭೇದ, ದಂಡ – ಎಂಬ ಚತುರೋಪಾಯಗಳನ್ನು ನೀತಿಶಾಸ್ತ್ರವು ಸೂಚಿಸುವುದು. ದಂಡೋಪಾಯವು ಕೊನೆಯದು. ಮೊದಲು ಸಾಮಾದ್ಯುಪಾಯಗಳನ್ನು ಏಕೆ ಉಪಯೋಗಿಸಬಾರದು? ಎಲೈ! ರಾಕ್ಷಸರೇ! ಹನುಮಂತನೊಬ್ಬನು ಬಂದು, ಈ ಮಹಾಸಮುದ್ರವನ್ನು ದಾಟಿ, ಎಂತಹ ಭಯಂಕರ ಕಾರ್ಯಮಾಡಿ ಹೋದನು? ಅವನಂತಹ ನೂರಾರು, ಸಾವಿರಾರು ವೀರರು ರಾಮನ ಕಡೆ ಇರುವರೆಂದು ಅವನು ಹೇಳಲಿಲ್ಲವೇ? ಶ್ರೀರಾಮನಿಗೆ ದೈವಬಲವಿರುವಂತೆ ಕಾಣುವುದು. ಅವನು ಶತ್ರುವೆಂದೂ, ಅಲ್ಪಬಲವುಳ್ಳವನೆಂದೂ ತಿರಸ್ಕರಿಸಬಾರದು. ನಿಷ್ಕಾರಣವಾಗಿ ಅವನ ಹೆಂಡತಿಯನ್ನು ಕದ್ದು ತಂದುದು ಸರಿಯೆ? ಅವನಲ್ಲಿ ದೋಷವಾದರೂ ಏನಿದೆ? ಅವನು ಅತಿಕ್ರಮಿಸಿದವನಲ್ಲ. ದಂಡ್ಯನೂ ಅಲ್ಲ.

ಸೀತೆಯಿಂದ ಮುಂದೆ ದೊಡ್ಡ ಅನರ್ಥ ಸಂಭವಿಸುವಂತೆ ಕಾಣುವುದು. ಅವಳನ್ನೇನೋ ಇಲ್ಲಿಗೆ ತಂದುದಾಯಿತು. ಅತಿ ದುರ್ಜಯವಾದ ವಾನರಸೈನ್ಯವು ಇಲ್ಲಿಯವರೆಗೆ ಬಂದುದೂ ಆಯಿತು. ಅದು ಲಂಕಾ ಪಟ್ಟಣವನ್ನು ಮುತ್ತಿ ಸರ್ವನಾಶಮಾಡುವುದಕ್ಕೆ ಮುಂಚೆ, ಸೀತೆಯನ್ನು ಅವನಿಗೊಪ್ಪಿಸುವುದು ಲೇಸು. ವೀರರೇ ! ನಾನು ಹೇಳುವ ಮಾತನ್ನು ಕೇಳಿ ರಾಕ್ಷಸಕುಲನಾಶಕವಾದ ಯುದ್ಧ ಪ್ರಯತ್ನವನ್ನು ಬಿಡಿ. ಸುಖವನ್ನೂ, ಧರ್ಮವನ್ನೂ ಕೆಡಿಸತಕ್ಕ ಕೋಪವನ್ನು ದೂರಮಾಡಿ. ಲಂಕಾ ಪಟ್ಟಣವನ್ನೂ ರಾಕ್ಷಸ ಸಮೂಹವನ್ನೂ ನಾಶದಿಂದ ತಪ್ಪಿಸಿ " ಎಂದನು.

ರಾವಣನು ರಾಜಸಭೆಯನ್ನು ಸೇರಿಸಿ, ವಿಭೀಷಣನನ್ನು ಕರೆಕಳುಹಿಸಿದನು. ಮಹಾ ಧೀಮಂತನಾದ ವಿಭೀಷಣನು, ಅಣ್ಣನಾದ ರಾವಣನನ್ನು ಹೊಗಳುತ್ತ ಅವನನ್ನು ಪ್ರಸನ್ನನಾಗಿ ಮಾಡಿಕೊಂಡು, ವಿನಯವಾಗಿ ಹೀಗೆ ಹೇಳುವನು. " ಅಣ್ಣಾ ! ರಾಕ್ಷಸೇಂದ್ರಾ ! ಸೀತೆಯನ್ನು ತಂದಾಗಿನಿಂದ ನಮಗೆ ದುಶ್ಶಕುನಗಳೇ ತೋರಿಬರುತ್ತಿವೆ. ಹವಿಸ್ಸಿನಿಂದ ಕೂಡಿದ ಅಗ್ನಿಯನ್ನು ಹುತಮಾಡಿದರೆ, ಜ್ವಲಿಸುತ್ತಿಲ್ಲ. ಅಗ್ನಿಶಾಲೆಯಲ್ಲಿಯೂ ವೇದಾಧ್ಯಯನ ಸ್ಥಳಗಳಲ್ಲಿಯೂ ಹಾವುಗಳು ಬರುತ್ತಿರುವುವು. ಕುದುರೆಗಳು ದೀನಧ್ವನಿಯಿಂದ ಕೂಗುತ್ತಿರುವುವು. ಒಂಟೆಗಳು ಕಣ್ಣೀರು ಸುರಿಸುತ್ತಿರುವುವು. ಕಾಗೆಗಳು ವಿಮಾನದ ಮೇಲೆ ಗುಂಪು ಕಟ್ಟುತ್ತಿರುವುವು. ಹದ್ದುಗಳು ಮಂಡಲಾಕಾರವಾಗಿ ಸುತ್ತುತ್ತಿರುವುವು. ಕ್ರೂರಮೃಗಗಳು ಪಟ್ಟಣದ ದ್ವಾರದಲ್ಲಿ ನಿಂತು ಕೂಗುತ್ತಿರುವುವು. ಈ ದುರ್ನಿಮಿತ್ತಗಳ ಸೂಚನೆಯನ್ನು ತಿಳಿಯಬೇಡವೇ ? ಅಣ್ಣಾ ! ಇವೆಲ್ಲಾ ಏನೋ ಮಹಾ ವಿಪತ್ತು ಸಂಭವಿಸಬಹುದೆಂಬುದನ್ನು ಸೂಚಿಸುವುವು. ಇದರಲ್ಲಿ ಸಂದೇಹವಿಲ್ಲ. ಈ ಅನರ್ಥ ಕುರುಹನ್ನು ಸಮಸ್ತ ರಾಕ್ಷಸರೂ, ಸ್ತ್ರೀಯರೂ, ಪ್ರಜೆಗಳೂ, ಎಲ್ಲರೂ ನೋಡುತ್ತಿದ್ದಾರೆ. ಅಗ್ರಜಾ ! ಕರುಳಿನ ಸಂಬಂಧ ಬಾಧಿಸುತ್ತಿರುವುದು. ಯಾವುದು ಶ್ರೇಯಸ್ಕರವೋ ಅದನ್ನು ತಿಳಿಸಿದ್ದೇನೆ" ಎಂದನು.

ರಾವಣನ ಸ್ವಭಾವಕ್ಕೆ ತಕ್ಕಹಾಗೆ, ಅವನ ಸುತ್ತಮುತ್ತಲಿದ್ದವರೆಲ್ಲ ದುಷ್ಟ ಸ್ವಭಾವದವರು. ಕುಂಭಕರ್ಣ, ಇಂದ್ರಜಿತ್, ಪ್ರಹಸ್ತ, ಮಹಾ

ಪಾರ್ಶ್ವ—ಮುಂತಾದ ರಾಕ್ಷಸರೆಲ್ಲ ಯುದ್ಧಕ್ಕೇ ಪ್ರೋತ್ಸಾಹ ಕೊಟ್ಟರು. ಅವರ ಅಟ್ಟಹಾಸಗಳೊಂದೂ ವಿಭೀಷಣನಿಗೆ ಹಿಡಿಸಲಿಲ್ಲ. ಅಣ್ಣನ ಮೇಲಿನ ಅಭಿಮಾನದಿಂದ ವಿಭೀಷಣನು ಪುನಃ ರಾವಣನಿಗೆ ಬುದ್ಧಿವಾದ ಹೇಳುವನು. ಸೀತೆಯು ಸಾಮಾನ್ಯ ಸ್ತ್ರೀ ಎಂದು ತಿಳಿಯುವುದು ಮೂರ್ಖ ತನವೆಂದೂ, ಅವಳೊಂದು ಮಹಾ ಕಾಳಸರ್ಪದಂತಿರುವಳೆಂದೂ, ಅವಳನ್ನು ಶ್ರೀರಾಮನಿಗೊಪ್ಪಿಸದಿದ್ದರೆ, ಇಡೀ ರಾಕ್ಷಸ ಕುಲವೇ ನಾಶ ವಾಗುವುದೆಂದೂ, ರಾಮಬಾಣದಿಂದ ಯಾರೂ ತಪ್ಪಿಸಿಕೊಳ್ಳುವ ಹಾಗಿಲ್ಲ ವೆಂದೂ ಎಚ್ಚರಿಕೆ ಕೊಡುವನು.

ಈ ಮಾತುಗಳನ್ನು ಕೇಳಿ ರಾವಣನಿಗೆ ಅತಿಯಾಗಿ ಕೋಪಬರುವುದು. ಮೂರ್ಖ ಸ್ವಭಾವದವರಿಗೆ ಸಾಮಾನ್ಯವಾಗಿ ಹಿತನುಡಿಗಳು ಹಿಡಿಸುವುದಿಲ್ಲ. ಬುದ್ಧಿಮಾತುಗಳನ್ನು ಕೇಳಿದಷ್ಟೂ ಅಂತಹವರು ವಿವೇಕಶೂನ್ಯರಾಗುವರು. ವಿವೇಚನಾಶಕ್ತಿ ಅವರಿಗೆ ಕಡಮೆಯಾಗುವುದು. ರಾವಣನ ಪರಿಸ್ಥಿತಿಯೂ ಹಾಗೆಯೇ ಆಯಿತು. ಅವನು ವಿಭೀಷಣನನ್ನೇ ನಿಂದಿಸಿದನು. ಮಿತ್ರ ನಂತೆ ನಟಿಸಿ, ಅವನು ಶತ್ರುಸಹಾಯಕನಾಗಿರುವನೆಂದೂ, ದಾಯಾದಿ ಮತ್ಸರದಿಂದ ದ್ರೋಹ ಬಗೆಯುತ್ತಿರುವನೆಂದೂ (ಜ್ಞಾತಿಗಳ ಮನೋ ಭಾವ ಪಡೆದಿರುವನೆಂದೂ) ದೂಷಿಸಿದನು. ಕುಲಗೇಡಿಯೂ, ದ್ರೋಹಿಯೂ ಆಗಿದ್ದರೂ, ತನ್ನ ತಮ್ಮನಾದುದರಿಂದ, ಕೊಲ್ಲಿಸದೆ ಬಿಡಬೇಕಾಗಿದೆ ಎಂದು ಕಠಿಣ ಮಾತುಗಳನ್ನಾಡಿದನು.

ರಾವಣನ ಕೆಟ್ಟ ಮಾತುಗಳು ವಿಭೀಷಣನಿಗೆ ಮುಳ್ಳು ಚುಚ್ಚಿ ದಂತಾದುವು. ಆ ದುಷ್ಟರ ಸಮೂಹದಲ್ಲಿ ಇನ್ನು ತಾನಿರುವುದು ಸರಿಯಲ್ಲವೆಂದು ಅವನು ತಿಳಿದನು. ಕೂಡಲೆ, ಅವನು ತನ್ನ ನಾಲ್ವರು ಮಂತ್ರಿಗಳೊಡನೆ ಆಕಾಶಕ್ಕೆ ಹಾರಿ, ರಾಮಾಶ್ರಯಕ್ಕಾಗಿ ಹೋಗುತ್ತಾ, ಅಣ್ಣನನ್ನು ಕುರಿತು ಹೀಗೆ ಹೇಳುವನು. "ಅಣ್ಣಾ! ಮೃತ್ಯುವಶನಾದ ನಿನ್ನನ್ನು ನೋಡಿ ನೀತಿ ಹೇಳಬೇಕೆಂಬ ನಿಯಮಕ್ಕೆ ಕಟ್ಟುಬಿದ್ದು ಇಷ್ಟು ಹೇಳಬೇಕಾಯಿತು. ಈ ರಾಕ್ಷಸ ಸಮೂಹದಲ್ಲಿ ನಿನ್ನನ್ನು ರಕ್ಷಿಸುವವರು ಯಾರೂ ಇಲ್ಲ. ಹಿತಚಿಂತಕರ್ಯಾರೂ ನಿನಗೆ ಇಲ್ಲ. ನಾನು ಹೇಳಿದ ಹಿತನುಡಿ ಗಳು ನಿನಗೆ ರುಚಿಸಲಿಲ್ಲ. ನೀನು ರಾಮಬಾಣದಿಂದ ಸಾಯಬಾರದೆಂದು

ಇಷ್ಟು ಹೇಳಬೇಕಾಯಿತು. ಇಗೋ! ನಾನು ನಿನ್ನನ್ನು ಬಿಟ್ಟು ಹೊರಟು ಹೋಗುವೆನು. ಈಗಲಾದರೂ ನಿನಗೆ ವಿವೇಕ ಗೋಚರವಾಗಲಿ. ನಿನ್ನನ್ನು ಕಾಪಾಡಿಕೊಳ್ಳುವ ಮಾರ್ಗವನ್ನು ನೀನು ನೋಡಿಕೋ" ಎಂದನು.

ಬ್ರಹ್ಮನ ವರದಿಂದ ಸಮಸ್ತ ಧರ್ಮಗಳನ್ನೂ ತಿಳಿದ ವಿಭೀಷಣನು ತಂದೆಗೆ ಸಮಾನನಾದ ಅಣ್ಣನನ್ನು ಕಷ್ಟಕಾಲದಲ್ಲಿ ಬಿಟ್ಟು ಹೋಗ ಬಹುದೇ ? ಹಾಗೆ ಹೋದರೂ ಶತ್ರುವಾಗಿ ಕೊಲ್ಲುವುದಕ್ಕೆ ಬಂದಿರುವ ಶ್ರೀರಾಮನ ಪಕ್ಷವನ್ನು ಸೇರಬಹುದೇ ? ಶತ್ರುಪಕ್ಷವನ್ನು ಸೇರಿದರೂ ಹೋಗಲಿ, ಅಣ್ಣನ ರಾಜ್ಯವನ್ನು ಅಪೇಕ್ಷಿಸಬಹುದೇ ? ಒಂದು ಪಕ್ಷ ರಾಜ್ಯಾಪೇಕ್ಷಿಯಾದರೂ ಅಣ್ಣನನ್ನು ಕೊಲ್ಲುವ ಉಪಾಯವನ್ನು ಹೇಳಿ ಕೊಡಬಹುದೇ ? ಇವೆಲ್ಲ ಧರ್ಮ ವಿರುದ್ಧವಲ್ಲವೇ ? ವಿಭೀಷಣನಂತಹ ಧರ್ಮಾತ್ಮನು ಇಂತಹ ಅಕಾರ್ಯ ಮಾಡಬಹುದೇ ? ಇವೇ ಮುಂತಾದ ಪ್ರಶ್ನೆಗಳು ಸಾಮಾನ್ಯ ಮಾನವರಿಗೆ ಗೋಚರವಾಗುವುದು ಸಹಜ. ನಿಜ ಸ್ಥಿತಿಯನ್ನು ಪರಿಶೀಲಿಸಿದರೆ ವಿಭೀಷಣನು ಮಾಡಿದ್ದು ಸರಿ. ಅವನು ಧರ್ಮ ರೀತಿಯಲ್ಲಿ ನಡೆದಿದ್ದಾನೆ ಎಂದೆನ್ನಿಸುವುದು.

ಲೋಕದಲ್ಲಿ ಸಾಮಾನ್ಯ ಧರ್ಮ, ವಿಶೇಷ ಧರ್ಮ ಎಂದು ಎರಡು ವಿಧ. ಅಣ್ಣನನ್ನು ಅನುವರ್ತಿಸಿ ಗೌರವದಿಂದ ವರ್ತಿಸುವುದು ಸಾಮಾನ್ಯ ಧರ್ಮ. ಪರಮಾತ್ಮನನ್ನು ಪೂಜಿಸಿ ಮೋಕ್ಷ ಪಡೆಯುವುದು ವಿಶೇಷ ಧರ್ಮ. ಇವೆರಡು ಧರ್ಮಮಾರ್ಗಗಳನ್ನು ಸರಿಹೊಂದಿಸಿಕೊಂಡು ಹೋಗ ಬೇಕಾದುದು ಧರ್ಮನಿಷ್ಠೆ. ಹೀಗೆ ಮಾಡಬೇಕೆಂಬ ದೃಷ್ಟಿಯಿಂದ ವಿಭೀಷಣನು ರಾವಣನಿಗೆ ಹಿತೋಪದೇಶಮಾಡಿದನು. ಧರ್ಮಮಾರ್ಗವನ್ನು ಅವನು ಹಿಡಿಯುವಂತೆ, ಸಾರಿ ಸಾರಿ ಹೇಳುವನು. ರಾಕ್ಷಸ ಸ್ವಭಾವ ವುಳ್ಳ ರಾವಣನಿಗೆ ತಮ್ಮನ ಮಾತುಗಳು ಹಿಡಿಸಲಿಲ್ಲ. ಆದುದರಿಂದ ವಿಭೀಷಣನು ಸಾಮಾನ್ಯ ಧರ್ಮ ಬಿಟ್ಟು ಲೋಕೇಶ್ವರನೂ, ಸರ್ವಲೋಕ ಶರಣ್ಯನೂ ಆದ ಶ್ರೀರಾಮನ ಮರೆಹೊಗುತ್ತಾನೆ. ಹೀಗೆ ಮಾಡಿದುದು ಸರಿ. ಇಲ್ಲಿ ಧರ್ಮಕ್ಕೆ ಲೋಪ ಬಂದಿಲ್ಲ.

ರಾಜ್ಯ ಸಂಪಾದನೆಯ ಅಪೇಕ್ಷೆಯಿಂದ ವಿಭೀಷಣನು ಶ್ರೀರಾಮನ ಹತ್ತಿರ ಬರುವುದಿಲ್ಲ. ಆಕಾಶದ ಮಧ್ಯ ಮಾರ್ಗದಲ್ಲಿಯೇ ನಿಂತ

ರಾಮನು ತನ್ನನ್ನು ಸ್ವೀಕರಿಸುವನೋ ಇಲ್ಲವೋ ಎಂಬ ಅನುಮಾನದಿಂದ ತನ್ನ ಸ್ಥಿತಿಯನ್ನು ಹೇಳಿಕೊಳ್ಳುತ್ತಾನೆ. ಹೆಂಡತಿ ಮಕ್ಕಳನ್ನೂ, ಲಂಕೆಯನ್ನೂ, ಮಿತ್ರರನ್ನೂ, ಐಶ್ವರ್ಯವನ್ನೂ, ಎಲ್ಲ ಸುಖವನ್ನು ಬಿಟ್ಟು ರಾಮನನ್ನು ಶರಣುಹೋಗಲು ಬಂದಿರುವೆನೆಂದು ಬೇಡಿಕೊಳ್ಳುತ್ತಾನೆ. ಲೋಕ ವಂದಿತನೂ, ರಘುಕುಲ ನಾಯಕನೂ, ಮಹಾತ್ಮನೂ, ಕರುಣಾಳುವೂ, ಆಗಿರುವ ಶ್ರೀರಾಮನಿಗೆ ವಿಭೀಷಣನು ಬಂದಿರುವನೆಂದು ತಿಳಿಸಬೇಕೆಂದು ವಾನರ ವೀರರನ್ನು ಕೇಳಿಕೊಳ್ಳುವನು. ರಾಜ್ಯದ ಆಸೆಯಿಂದ ಹೇಳಿದ ಮಾತುಗಳಲ್ಲ ಇವು. ವಿಭೀಷಣನ ಧರ್ಮಮಾರ್ಗವನ್ನು ಕಂಡು ಶ್ರೀರಾಮನು ಸಂತೋಷಗೊಂಡವನಾಗಿ ತನಗೆ ಸಹಜವಾದ ವಾತ್ಸಲ್ಯದಿಂದ ಲಂಕಾರಾಜ್ಯವನ್ನು ಕೊಡುವುದಾಗಿ ವಚನವೀಯುವನು. ರಾಮನ ಬಲವಂತಕ್ಕಾಗಿ ವಿಭೀಷಣನು ರಾಜ್ಯವನ್ನು ಸ್ವೀಕರಿಸುವನು. ಶ್ರೀರಾಮ ಸೇವಾ ದೃಷ್ಟಿಯಿಂದಲೇ ಅದನ್ನು ಸ್ವೀಕರಿಸುವುದಾಗಿ ಭಾವಿಸುವನು. ಹೀಗೆ ತನ್ನ ಅಣ್ಣನನ್ನು ಬಿಟ್ಟು ವಿಭೀಷಣನು ಶ್ರೀರಾಮನನ್ನು ಸೇರಿರುವುದರಲ್ಲಿ ದೋಷವಿಲ್ಲ.

ಶ್ರೀರಾಮನನ್ನು ಆಶ್ರಯಿಸುವಾಗಲೂ ಕೂಡ, ಮೊದಲು ನೇರವಾಗಿ ಶ್ರೀರಾಮನನ್ನೇ ಪ್ರಾರ್ಥಿಸದೆ, ಅವನ ಅಂತರಂಗ ಭಕ್ತರಾದ ವಾನರ ವೀರರನ್ನು ಬೇಡಿಕೊಳ್ಳುವನು. ಅವರು ಮೊದಲು ತನಗೆ ಪ್ರತಿಕೂಲರಾಗಿದ್ದರೂ ಕೂಡ, ತಾನು ಅವರನ್ನು ಶರಣುಹೊಕ್ಕರೆ, ತನ್ನ ಕಾರ್ಯ ಸುಲಭವಾಗುವುದೆಂದು ಅವನು ತಿಳಿಯುತ್ತಾನೆ. ಆದುದರಿಂದಲೇ ವಿಭೀಷಣನು ಶರಣಾಗತನಾಗಿ ಬಂದಿರುವ ಅಂಶವನ್ನು ಶ್ರೀರಾಮನಿಗೆ ವಿಜ್ಞಾಪಿಸಬೇಕೆಂದು ವಾನರ ವೀರರಿಗೆ ತಿಳಿಸುವನು. ಒಂದು ಪಕ್ಷ ವಾನರ ವೀರರು ಈ ಅಂಶವನ್ನು ಶ್ರೀರಾಮನಿಗೆ ವಿಜ್ಞಾಪಿಸದೆ ಹೋದರೆ, ಅಥವಾ ಬಿನ್ನಹಮಾಡುವುದನ್ನು ನಿಧಾನಮಾಡಿದರೆ, ಭಕ್ತರ ಕಷ್ಟವನ್ನು ಅಡಗಿಸುವ ಉದಾರ ಗುಣವುಳ್ಳ ಶ್ರೀರಾಮನು ತಾನಾಗಿಯೇ ಬಂದು ತನ್ನನ್ನು ಪರಿಗ್ರಹಿಸುವನೆಂದು ಹೇಳುವನು. ಇದರಿಂದ ವಾನರ ವೀರರ ಪುರುಷಕಾರಕ್ಕೆ ಅಥವಾ ನೀತಿಮಾರ್ಗಕ್ಕೆ ಲೋಪಬರುವುದೇ ವಿನಹ ಮತ್ತೆ ಬೇರೆ ಇಲ್ಲವೆಂದು ಸೂಚಿಸಿದಂತಾಯಿತು.

ವಿಭೀಷಣನು ಆಕಾಶದಲ್ಲಿ ನಿಂತು ಹೀಗೆ ಪ್ರಾರ್ಥಿಸಿದಾಗ, ಸುಗ್ರೀವನು ಆ ದುಷ್ಟ ರಾಕ್ಷಸನನ್ನು ಸೇರಿಸಬಾರದೆಂದು ಹೇಳುವನು. ಅಂಗದನು ಅವನನ್ನು ಪರೀಕ್ಷಿಸಿ, ದುಷ್ಟನಲ್ಲವೆಂದು ಕಂಡುಬಂದರೆ ಕರೆಸಿಕೊಳ್ಳಬಹುದೆನ್ನುವನು. ಶರಣಾಗತನಾಗಿ ಬಂದವನಲ್ಲಿ ದೋಷವಿಲ್ಲವೆಂದೂ ಅಂತಹವನು ಯಾರೇ ಆಗಿರಲಿ ಅಂಗೀಕರಿಸಬಹುದೆಂದು ಹನುಮಂತನು ಸೂಚಿಸುವನು. ಆಗ ಶ್ರೀರಾಮನು ಶರಣು ಎಂದು ಯಾರು ಬಂದು ಹೇಳಿದರೂ ಅಂತಹವರನ್ನು ಪರಿಗ್ರಹಿಸಬೇಕೆನ್ನುವನು. ಶರಣಾಗತನ ವಿಷಯದಲ್ಲಿ ಪರೀಕ್ಷೆ ಬೇಕಿಲ್ಲ. ಶರಣು ಎಂಬ ಮೂರಕ್ಷರ ಯಾವಾಗ ಅವನ ಬಾಯಿಂದ ಹೊರಡುವುದೋ ಅಂತಹವರನ್ನು ಮರುಕ್ಷಣವೇ ಅಂಗೀಕರಿಸಬೇಕೆಂಬುದು ಶ್ರೀರಾಮನ ಮತ. ಇಲ್ಲಿ ಗುಣ ದೋಷ ವಿಮರ್ಶೆಗೆ ಅವಕಾಶವೇ ಇಲ್ಲ. ಇಂತಹ ಅನೇಕ ಸಂದರ್ಭಗಳನ್ನು ಶ್ರೀರಾಮನು ಉದಹರಿಸುತ್ತಾನೆ.

ಒಂದಾನೊಂದು ಕಾಲದಲ್ಲಿ ಒಂದು ಕಾಡುಕಪಿಯು, ತನಗೆರಡನ್ನು ಬಗೆದ ಮನುಷ್ಯನನ್ನು ಹುಲಿಯ ಬಾಯಿಂದ ತಪ್ಪಿಸಿ ಉಪಕಾರಮಾಡಿತು. ಒಂದು ಕಪೋತವು ತನ್ನ ಶತ್ರುವಾದ ಬೇಡನು ಶರಣನಾದುದರಿಂದ, ಅವನನ್ನು ಕಾಪಾಡಿತು. ಹೀಗೆ ತಿರ್ಯಕ್ ಜಂತುಗಳೇ ತಮ್ಮ ಸಹಜ ಶತ್ರುಗಳಾದವರು ಶರಣು ಎಂದು ಹೇಳಿದ ಕೂಡಲೇ, ರಕ್ಷಿಸಿರುವಾಗ ತಾನು ಇವನನ್ನು ಉಪೇಕ್ಷೆಮಾಡಕೂಡದು. ತನ್ನ ಹೆಂಡತಿಯನ್ನು ನಿಷ್ಕಾರಣವಾಗಿ ಕೊಂದು ಅಪರಾಧಮಾಡಿದ ಬೇಡನೇ ಅತಿಥಿಯಾಗಿ ಬಂದು ಶರಣುಹೋದಾಗ, ಆ ಸಾಮಾನ್ಯ ಹಕ್ಕಿಯು ಅವನನ್ನು ಕಾಪಾಡಲಿಲ್ಲವೇ? ಇದರಿಂದ ಮಾನವನು ನೀತಿ ಕಲಿಯಬೇಡವೇ? ಹಾಗೆಯೇ ತನ್ನ ಪತ್ನಿಯನ್ನು ಕದ್ದುತಂದು ಮಹಾಪರಾಧಿಯಾದ ರಾವಣನೇ ಬಂದು ಶರಣು ಎಂದರೆ ಅವನನ್ನೂ ಕೂಡ ಕ್ಷಮಿಸುವೆನೆಂದು ಶ್ರೀರಾಮನು ವ್ಯಕ್ತಪಡಿಸಿದಂತಾಯಿತಲ್ಲವೇ?

ಮೊದಲು ಆಕ್ಷೇಪಿಸಿದ ಸುಗ್ರೀವನೇ ಶ್ರೀರಾಮನ ಅಪ್ಪಣೆಯ ಪ್ರಕಾರ ವಿಭೀಷಣನನ್ನು ಕರೆದುಕೊಂಡು ಬರುವನು. ಎಲ್ಲವನ್ನೂ ತಿಳಿದ ವಿಭೀಷಣನು ಸಂತೋಷದಿಂದ ಉಬ್ಬಿದವನಾಗಿ, ಭಕ್ತರಾದ ತನ್ನ ನಾಲ್ವರು ಮಂತ್ರಿಗಳೊಡನೆ ಶ್ರೀರಾಮನ ಪಾದಮುಟ್ಟಿ ನಮಸ್ಕಾರಮಾಡಿ,

'ಸ್ವಾಮಿ! ನಾನು ರಾವಣನ ತಮ್ಮನು. ಅವನಿಂದ ತಿರಸ್ಕೃತನಾಗಿ ಬಂದಿರುವೆನು. ನೀನು ಸಮಸ್ತ ಲೋಕಕ್ಕೂ ರಕ್ಷಕನು. ನನ್ನ ವಾಸ ಸ್ಥಾನವಾದ ಲಂಕೆಯನ್ನೂ, ರಾಜ್ಯವನ್ನೂ, ಹಣವನ್ನೂ, ಸ್ನೇಹಿತರನ್ನೂ, ಬಂಧು ಬಳಗವನ್ನೂ ಬಿಟ್ಟು ನಿನ್ನನ್ನು ಶರಣುಹೋಗಲು ಬಂದಿರುವೆನು' ಎಂದು ದೈನ್ಯದಿಂದ ಹೇಳಿಕೊಳ್ಳುವನು. ಕೂಡಲೇ ಶ್ರೀರಾಮನು ಅವನನ್ನು ಸಮಾಧಾನಪಡಿಸುವನು. ಲಂಕಾರಾಜ್ಯದ ಬಲಾಬಲಗಳನ್ನು ತಿಳಿದುಕೊಳ್ಳುವನು. ರಾಕ್ಷಸರನ್ನು ಕೊಲ್ಲುವ ಕಾರ್ಯದಲ್ಲಿ ತನ್ನ ಕೈಲಾದ ಸಹಾಯ ಮಾಡುವುದಾಗಿ ವಿಭೀಷಣನು ಪುನಃ ಹೇಳುವನು. ಈ ಮಾತುಗಳನ್ನು ಕೇಳಿ ಶ್ರೀರಾಮನಿಗೆ ಸಂತೋಷವಾಗುವುದು. ಲಕ್ಷ್ಮಣ ನಿಂದ ಸಮುದ್ರಜಲವನ್ನು ತರಿಸಿ ವಿಭೀಷಣನಿಗೆ ಲಂಕಾರಾಜ್ಯದ ಪಟ್ಟಾಭಿ ಷೇಕ ಮಾಡುವನು.

ಮುಂದೆ ಯುದ್ಧ ಆರಂಭವಾಗುವುದು. ರಾಕ್ಷಸವೀರರು ಒಬ್ಬೊಬ್ಬ ರಾಗಿ ಯುದ್ಧದಲ್ಲಿ ಸಾಯುವರು. ಯುದ್ಧಕಾಲದಲ್ಲಿ ಆಯಾ ಸಮಯಕ್ಕೆ ತಕ್ಕಹಾಗೆ ಶ್ರೀರಾಮನಿಗೆ ವಿಭೀಷಣನು ಸಲಹೆ ಕೊಡುವನು. ಅನೇಕ ರಾಕ್ಷಸರು ಹತರಾದಮೇಲೆ, ರಾವಣನ ಮಗನಾದ ಇಂದ್ರಜಿತ್ತುವು ಮಾಯಾ ಸೀತೆಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು, ಯುದ್ಧಭೂಮಿಗೆ ಬಂದು ಹನುಮಂತಾದಿ ವಾನರವೀರರು ನೋಡುತ್ತಿರುವಹಾಗೆ ಮಾಯಾ ಸೀತೆಯ ತಲೆಯನ್ನು ಕತ್ತರಿಸುವನು. ಅವಳು ನಿಜವಾದ ಸೀತೆ ಇರ ಬಹುದೋ ಏನೋ ಎಂಬ ಅನುಮಾನವುಂಟಾಯಿತು ಅವರಿಗೆ. ಈ ವಿಷಯ ವನ್ನು ಅವರು ರಾಮಲಕ್ಷ್ಮಣರಿಗೆ ತಿಳಿಸಿದರು. ಅವರೆಲ್ಲ ದುಃಖಪಡುತ್ತಿರು ವಾಗ, ವಿಭೀಷಣನು ಅವರನ್ನೆಲ್ಲಾ ಸಮಾಧಾನಪಡಿಸಿ, ಇಂದ್ರಜಿತ್ತುವಿನ ಮಾಯೆಯನ್ನು ಹೊರಗೆಡಹುವನು. ಸೀತಾದೇವಿಯು ಇಂದ್ರಜಿತ್ತುವಿನ ರಥದಲ್ಲಿ ಕುಳಿತುಕೊಳ್ಳುವುದು ಸಾಧ್ಯವೇ? ವಾನರರನ್ನು ಮರಳುಮಾಡು ವುದಕ್ಕೆ ಹೂಡಿದ ಉಪಾಯವದು. ಇಷ್ಟೆಲ್ಲ ಆದಮೇಲೆ ಇಂದ್ರಜಿತ್ತು ನಿಕುಂಭಿಳಾ ಎಂಬ ಯಾಗದಲ್ಲಿ ತೊಡಗಿರುವನೆಂದೂ, ಅವನ ಯಾಗದ ಹೋಮಕಾರ್ಯ ಸಾಂಗವಾಗಿ ನೆರವೇರಿಬಿಟ್ಟರೆ, ಅವನು ಅಜೇಯನಾಗಿ ಬಿಡುವನೆಂದೂ, ಅದು ಪೂರ್ಣವಾಗುವುದಕ್ಕೆ ಮುಂಚೆ ಅವನ ಮೇಲೆ

ಬಿದ್ದು ವಿಘ್ನವನ್ನುಂಟುಮಾಡಬೇಕೆಂದೂ, ವಿಭೀಷಣನು ಸಲಹೆ ಕೊಡುವನು.

ಹಿಂದೆ ಇಂದ್ರಜಿತ್ತುವಿಗೆ ಬ್ರಹ್ಮನು ವರ ಕೊಟ್ಟಿರುವನು. ಅವನು ನಿಕುಂಭಿಳಾ ಯಾಗ ಪ್ರಾರಂಭಿಸಿ, ಅದರ ಮಧ್ಯೆ ಯಾರಾದರೂ ಅದಕ್ಕೆ ವಿಘ್ನವನ್ನುಂಟುಮಾಡಿದಾಗ ಅವನ ವಧೆಯೇ ವಿನಹ ಮತ್ತ್ಯಾವಾಗಲೂ ಅವನಿಗೆ ಯಾರಿಂದಲೂ ಮರಣವುಂಟಾಗುವುದಿಲ್ಲ. ಇದೇ ಬ್ರಹ್ಮನ ವರ. ಇದನ್ನು ವಿಭೀಷಣನು ಚೆನ್ನಾಗಿ ತಿಳಿದಿದ್ದನು. ಒಳ್ಳೆಯ ಸಮಯದಲ್ಲಿ ಅವನು ಲಕ್ಷ್ಮಣನನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ, ತಕ್ಕ ಉಪಾಯಗಳನ್ನು ಸೂಚಿಸಿ, ಇಂದ್ರಜಿತ್ತನ್ನು ಕೊಲ್ಲಿಸುವನು. ಹೀಗೆ ಶ್ರೀರಾಮನ ಕಾರ್ಯವೆಲ್ಲ ನಿರ್ವಿಘ್ನವಾಗಿ ನೆರವೇರುವಂತೆ ವಿಭೀಷಣನು ಮಾಡುವನು.

ವಿಭೀಷಣನನ್ನು ದ್ರೋಹಿ ಅಥವಾ ವಿಶ್ವಾಸಘಾತುಕ ಎಂದು ಉತ್ತರ ದೇಶದಲ್ಲಿ ಕೆಲವರು ಕರೆಯುತ್ತಾರೆ. ಇದು ತಪ್ಪು. ಹೀಗೆ ಅವನನ್ನು ಕರೆಯುವುದು ಬಹು ವಿಷಾದಕರ. ವಾಲ್ಮೀಕಿ ಮಹರ್ಷಿಯ ಉದ್ದೇಶಕ್ಕೆ ಇದು ವಿರೋಧವಾಗಿದೆ. ಕವಿಯು ಅವನನ್ನು ಧರ್ಮಾತ್ಮ ಎಂದು ಕರೆದಿದ್ದಾನೆ. ವಿಭೀಷಣನು ಸರ್ವೋತ್ತಮನಾದ ಭಕ್ತ. ಶ್ರೀರಾಮನಲ್ಲಿ ತನ್ನ ಅನುಪಮಭಕ್ತಿಯನ್ನು ಅವನು ವ್ಯಕ್ತಪಡಿಸಿದ್ದಾನೆ. ಮಾನವನನ್ನು ಅಧಃಪಾತಾಳಕ್ಕೆ ಒಯ್ಯುತಕ್ಕ ನೀಚತನಗಳಿಗೆಲ್ಲಾ ಮೂರ್ತಿಮತ್ತನಾಗಿದ್ದ ತನ್ನಣ್ಣನಾದ ರಾವಣನನ್ನು ಬಿಟ್ಟು, ಅವನ ಶತ್ರುವಾದ ಶ್ರೀರಾಮನ ಪಕ್ಷವನ್ನು ಸೇರುತ್ತಾನೆ. ಹೀಗೆ ಮಾಡಬಾರದಾಗಿತ್ತೆಂದು ಕೆಲವರು ಹೇಳುತ್ತಾರೆ. ಒಂದುಪಕ್ಷ ಅಣ್ಣನನ್ನು ಬಿಟ್ಟುಹೋದರೂ, ಶತ್ರುಪಕ್ಷವನ್ನು ಸೇರಬಾರದಾಗಿತ್ತು. ಸೇರಿದರೂ ತಟಸ್ಥನಾಗಿರಬೇಕಾಗಿತ್ತು. ತನ್ನ ಸ್ವಕುಲನಾಶಕ್ಕೆ, ತನ್ನ ಅಣ್ಣ ತಮ್ಮಂದಿರನ್ನೂ, ಬಂಧು ಬಳಗವನ್ನೂ ಕೊಲ್ಲಿಸುವುದಕ್ಕೆ, ಅವನು ಶತ್ರುವಿಗೆ ಸಹಾಯ ಮಾಡಬಾರದಾಗಿತ್ತು; ಇಂದ್ರಜಿತ್ತನ್ನು ಕೊಲ್ಲಿಸುವುದಕ್ಕೂ, ರಾವಣ ಕುಂಭಕರ್ಣರ ವಧೆಗೂ ಉಪಾಯವನ್ನು ಹೇಳಿಕೊಡಬಾರದಾಗಿತ್ತು ಎಂಬುದಾಗಿ ಕೆಲವರು ಹೇಳುತ್ತಾರೆ. ಇದು ಸರಿಯಲ್ಲ. ಏಕೆಂದರೆ, ಇಲ್ಲಿ ವಿಭೀಷಣನ ನಡತೆಯನ್ನು

ಸಾಮಾನ್ಯ ಮಾನವದೃಷ್ಟಿಯಿಂದ ನೋಡಬಾರದು. ತನಗೆ ಸಹಜವಾಗಿ ಬಂದ ಧರ್ಮಾತ್ಮ ಎಂಬ ಹೆಸರನ್ನು ಸಾರ್ಥಕಪಡಿಸಿಕೊಂಡಿದ್ದಾನೆ. ವಿವೇಚನಾಯುತವಾಗಿ ಅವನು ವರ್ತಿಸಿದ್ದಾನೆ.

ಲೋಕದಲ್ಲಿರುವುದು ಧರ್ಮ, ಅಧರ್ಮ ಇವೆರಡು. ಅಧರ್ಮಿಯಾದವನು ಬಹುಕಾಲ ಬಾಳಿಯಾನೆ? ಅಧರ್ಮವು ಕೆಟ್ಟಕೆಲಸವನ್ನು ಮಾಡಿಸುವುದು. ಲೋಕನಿಂದ್ಯವಾದ ಕಾರ್ಯ ಮಾಡಿಸುವುದು. ಅನೀತಿಗೆ ಎಳೆಯುವುದು. ಮಾಡಬಾರದ ಕೆಲಸ ಮಾಡಿಸುವುದು. ಆಡಬಾರದ ಮಾತುಗಳನ್ನಾಡಿಸುವುದು. ಅಧರ್ಮಿಗೆ, ಇಡೀ ಲೋಕವೇ ಹೀಯಾಳಿಸುತ್ತಿದ್ದರೂ, ಸ್ವಜನರೇ ಬುದ್ಧಿ ಹೇಳುತ್ತಿದ್ದರೂ, ಇವೊಂದೂ ಹಿಡಿಸುವುದಿಲ್ಲ. ತಾನು ಮಾಡುವುದೇ ಸರಿ ಎಂಬ ದುರಭಿಮಾನ, ದುರಹಂಕಾರ ಹುಟ್ಟುವುದು. ರಾವಣನಿಗಾದರೂ ಹೀಗೆ ತಾನೇ ಆದುದು? ಅಧರ್ಮವನ್ನು ಧರ್ಮ ಮೆಟ್ಟಬೇಕು. ಧರ್ಮಕ್ಕೆ ಚ್ಯುತಿ ಇಲ್ಲ. ಸತ್ಯ ಧರ್ಮಗಳಿಗೆ ಜಗತ್ತಿನಲ್ಲಿ ಎಂದಿಗೂ ಜಯ. ಮಾನವನು ಧರ್ಮನಿರತನಾಗಿರಬೇಕು. ಇಲ್ಲವೇ ಅಧರ್ಮಿಯಾಗಬೇಕು. ಧರ್ಮ, ಅಧರ್ಮ ಮಾರ್ಗಗಳನ್ನು ಬಿಟ್ಟು ಪ್ರತ್ಯೇಕವಾದ ಇನ್ನೊಂದು ಮಾರ್ಗವನ್ನನುಸರಿಸಲು ಮಾನವನಿಗೆ ಸಾಧ್ಯವಿಲ್ಲ. ಹಾಗೆ ಮಾಡಬಾರದು.

ಇಲ್ಲಿ ವಿಭೀಷಣ ಧರ್ಮಿ. ರಾವಣ ಅಧರ್ಮಿ. ಅವನ ನಾಶವಾಗಲೇಬೇಕು. ತಮ್ಮನಿಗಿಂತ ಹಿತರಾದವರು ಇನ್ನಾರು? ವಿಭೀಷಣ ಸಾಮಾನ್ಯ ತಮ್ಮನಲ್ಲ. ಧರ್ಮಾತ್ಮ; ಅಭಿಮಾನಿ; ಪರಮಭಕ್ತ; ರಾಷ್ಟ್ರಪ್ರೇಮಿ; ವಿಶ್ವಪ್ರೇಮಿ. ಇಂತಹವನ ಹಿತನುಡಿಗಳನ್ನು ಕೇಳದೆ, ಅವನು ಹೇಳುತ್ತಿರುವುದೇನೆಂಬುದನ್ನು ವಿವೇಚನೆಯಿಂದ ಪರ್ಯಾಲೋಚಿಸದೆ, ರಾವಣನು ಅವನನ್ನು ರಾಜ್ಯ ಬಿಟ್ಟು ಹೊರಟುಹೋಗೆಂದು ಹೇಳುವನು. ರಾವಣನ ಅಧರ್ಮಯುತ ಮಾತುಗಳು ವಿಭೀಷಣನಿಗೆ ಹಿಡಿಸುವುದಿಲ್ಲ. ಅವನಿಗುಳಿದುದು ಒಂದೇ ಮಾರ್ಗ. ಅಧರ್ಮವನ್ನು ನಿರ್ಮೂಲ ಮಾಡುವುದು. ಅದನ್ನು ಅಳಿಸಿಹಾಕುವುದು. ಹಾಗೆ ಮಾಡಬೇಕಾದರೆ ಅವನು ಧರ್ಮದ ಮರೆ ಹೋಗಲೇಬೇಕು. ಧರ್ಮಾವತಾರಿಯಾದ ರಾಮನ ಮೂಲಕ, ಅಧರ್ಮವನ್ನು ನಾಶಮಾಡಿಸಲೇ ಬೇಕು. ಧರ್ಮಾತ್ಮನಿಗೆ ಇದಕ್ಕಿಂತ

ಹೆಚ್ಚಿನದಿನ್ನೇನು ಬೇಕು ? ಆದುದರಿಂದ ಧರ್ಮಾತ್ಮನಾದ ವಿಭೀಷಣನು, ಲೋಕವಂದ್ಯನೂ, ಧರ್ಮಮೂರ್ತಿಯೂ ಆದ ಶ್ರೀರಾಮನ ಪಕ್ಷವನ್ನು ಸೇರಿ, ಲೋಕನಿಂದ್ಯನೂ, ದುರಾಚಾರಿಯೂ, ದುರ್ಮಾರ್ಗಪ್ರವರ್ತಕನೂ, ಅಧರ್ಮಿಯೂ ಆದ ರಾವಣನನ್ನು ನಾಶಮಾಡಿಸಿದುದು ಸರಿ. ಹೀಗೆ ಮಾಡಿದುದರಿಂದ ವಿಭೀಷಣನು ನಿಜವಾದ ರಾಷ್ಟ್ರಪ್ರೇಮಿಯೇ ವಿನಹ ದ್ರೋಹಿಯಲ್ಲ.

ವಿಭೀಷಣನು ಧರ್ಮಾತ್ಮನೆನ್ನುವುದಕ್ಕೆ ಬೇಕಾದಷ್ಟು ನಿದರ್ಶನ ಗಳಿವೆ. ಹನುಮಂತನು, ವಿಭೀಷಣನು ಧರ್ಮಾತ್ಮ, ರಾಕ್ಷಸನಲ್ಲ. ರಾಕ್ಷಸ ಗುಣಗಳು ನಿಜವಾಗಿ ಅವನಲ್ಲಿ ಇಲ್ಲ ಎಂದು ಶ್ರೀರಾಮನಿಗೆ ಹೇಳು ವನು. ಲಂಕೆಯಲ್ಲಿ ರಾಕ್ಷಸರು ತನ್ನನ್ನು ಬಂಧಿಸಿ, ರಾವಣನ ಸಭೆಗೆ ಒಯ್ದಾಗ, ರಾವಣನು ತನಗೆ ಮರಣದಂಡನೆ ವಿಧಿಸಿದಾಗ, ವಿಭೀಷಣನು ಮಧ್ಯೆ ಪ್ರವೇಶಿಸಿ, ರಾಯಭಾರಿಯಾಗಿ ಬಂದವನನ್ನು ಕೊಲ್ಲಿಸುವುದು ಧರ್ಮನಿಷಿದ್ಧವೆಂದು ರಾವಣನಿಗೆ ನೀತಿಯನ್ನು ಬೋಧಿಸಿದನೆಂದು ತಿಳಿಸು ವನು. ವಿಭೀಷಣನ ಮಗಳಾದ ತ್ರಿಜಟೆಯು ಅಶೋಕವನದಲ್ಲಿ ಬಂಧಿ ಯಾಗಿದ್ದ ಸೀತಾದೇವಿಗೆ ಬೆಂಗಾವಲಾಗಿದ್ದಳೆಂದೂ, ಆಗಾಗ್ಯೆ ಅವಳಿಗೆ ಧೈರ್ಯ ಹೇಳಿ, ಸಮಾಧಾನಪಡಿಸುತ್ತಿದ್ದಳೆಂದೂ ಹೇಳುವನು. ಜನಸ್ಥಾನ ದಲ್ಲಿ ಶೂರ್ಪಣಖಿಯು ಶ್ರೀರಾಮನಿಗೆ ವಿಭೀಷಣನ ವಿಚಾರವಾಗಿ ಹೇಳು ವಳು. ಅವನಲ್ಲಿ ಇತರ ರಾಕ್ಷಸರಲ್ಲಿರುವಂತಹ ರಾಕ್ಷಸಗುಣಗಳೊಂದೂ ಇಲ್ಲವೆಂದೂ, ಅವನು ಧರ್ಮಾತ್ಮನೆಂದೂ ತಿಳಿಸುವಳು. ರಾವಣನ ರಾಜಸಭೆಯಲ್ಲಿ ಇಂದ್ರಜಿತ್ತು ಹೇಳುವುದೇನೆಂದರೆ, ತನ್ನ ಚಿಕ್ಕಪ್ಪನಾದ ವಿಭೀಷಣನಲ್ಲಿ ಇತರ ರಾಕ್ಷಸರಲ್ಲಿರುವ ಸ್ವಭಾವಜನ್ಯವಾದ ರಾಕ್ಷಸಗುಣ ಗಳೊಂದೂ ಇಲ್ಲದೆ, ಅವನು ಧರ್ಮಾತ್ಮನಾಗಿರುವುದರಿಂದ ಅವನನ್ನು ತಾನು ದ್ವೇಷಿಸುವುದಾಗಿ ಕಾರಣ ಹೇಳುವನು. ಕುಂಭಕರ್ಣನೂ ಕೂಡ ರಾವಣನಿಗೆ ವಿಭೀಷಣನ ವಿಚಾರವಾಗಿ ಒಳ್ಳೆಯ ಮಾತುಗಳನ್ನೇ ಹೇಳು ವನು. ಆದರೆ ಅವನು ವಿಭೀಷಣನ ಹಾಗೆ ಮಾಡದೆ, ತನ್ನ ರಾಕ್ಷಸ ಸ್ವಭಾವಕ್ಕನುಗುಣವಾಗಿ, ಅಣ್ಣನ ಪಕ್ಷದಲ್ಲಿ ಸೇರಿ ಯುದ್ಧಮಾಡಲು ಸಮ್ಮತಿ ಸುವನು. ವಿಭೀಷಣನನ್ನು ರಾಜ್ಯಭ್ರಷ್ಟನನ್ನಾಗಿ ಓಡಿಸಿದ ರಾವಣನಿಗೂ

ಕೂಡ ಅವನ ವಿಚಾರದಲ್ಲಿ ಕೊನೆಗೆ ಕನಿಕರ ಹುಟ್ಟಿ, ತಾನು ಅವನ ಮಾತನ್ನು ಕೇಳಲಿಲ್ಲವಲ್ಲಾ ಎಂಬ ಪಶ್ಚಾತ್ತಾಪ ಬುದ್ಧಿ ಹುಟ್ಟುವುದು. ಅತ್ಯಂತ ಅಧರ್ಮಿಯಾದ ರಾವಣನಿಗೆ, ಧರ್ಮಾತ್ಮನಾದ ವಿಭೀಷಣನ ವಿಷಯದಲ್ಲಿ, ಎಲ್ಲವೂ ಮುಗಿದು ತಾನು ನಾಶವಾಗುವ ಕಾಲದಲ್ಲಿ ಒಳ್ಳೆಯ ಭಾವನೆ ಮೂಡುವುದು. ಇದರಿಂದ ಧರ್ಮಕ್ಕೆ ಎಂದಿಗೂ ಚ್ಯುತಿಇಲ್ಲ ಎಂಬುದು ವ್ಯಕ್ತವಾಗುವುದಿಲ್ಲವೇ? ವಿಭೀಷಣನು ಧರ್ಮಾತ್ಮನೆಂದು ಅನೇಕರು ಅನೇಕ ರೀತಿಯಲ್ಲಿ ಹೇಳಿದ್ದಾರೆ. ಇದರ ಜೊತೆಗೆ, ವಿಭೀಷಣನು ತನ್ನ ಕಾರ್ಯದಿಂದಲೇ, ತಾನು ಧರ್ಮಾತ್ಮನೆಂಬುದನ್ನು ಸ್ಥಾಪಿಸಿದ್ದಾನೆ.

ಇಂದ್ರಜಿತ್ತುವಿನ ನಾಗಬಂಧಪಾಶದಿಂದ ಮೂರ್ಛೆಹೋದ ಕಾಲದಲ್ಲಿ, ಸುಗ್ರೀವಾದಿ ಕಪಿವೀರರು ರಾಮ ಲಕ್ಷ್ಮಣರು ಸತ್ತುಹೋದರೆಂದು ದುಃಖ ಪಡುವರು. ಆಗ ವಿಭೀಷಣನು, ಅವರು ಸತ್ತಿಲ್ಲವೆಂದೂ, ಅಂತಹ ಪರಿಸ್ಥಿತಿ ಅವರ ಮುಖಮುದ್ರೆಯಿಂದ ವ್ಯಕ್ತಪಡುತ್ತಿಲ್ಲವೆಂದೂ, ಅದೆಲ್ಲಾ ಇಂದ್ರಜಿತ್ತುವಿನ ಮೋಸವೆಂದೂ ಹೇಳಿ, ಕಪಿವೀರರನ್ನು ಸಮಾಧಾನ ಪಡಿಸುವನು. ಇಂದ್ರಜಿತ್ತು ನಿಕುಂಭಿಳಾ ಯಾಗಮಾಡಲು, ಆಲದ ಮರದ ಹತ್ತಿರ ಬಂದು ಸೇರಿದಾಗ ವಿಭೀಷಣನು, ಯಾಗ ಪೂರ್ತಿಯಾದ ಭಾಗದಲ್ಲಿ ಉಂಟಾಗಬಹುದಾದ ಕೆಟ್ಟ ಪರಿಣಾಮವನ್ನು ರಾಮನಿಗೆ ವಿವರಿಸಿ, ಯಾಗಪೂರ್ತಿಗೆ ಅವಕಾಶ ಕೊಡದಹಾಗೆ, ಇಂದ್ರಜಿತ್ತುವನ್ನು ಕೊಲ್ಲಬೇಕೆಂಬ ಉಪಾಯ ಹೇಳಿಕೊಡುವನು. ಆ ಕಾಲವನ್ನು ಬಿಟ್ಟಿದ್ದರೆ, ಇಂದ್ರಜಿತ್ತನ್ನು ಕೊಲ್ಲಲು ಸಾಧ್ಯವೇ ಆಗುತ್ತಿರಲಿಲ್ಲ. ಇಂದ್ರಜಿತ್ತು ಅದೃಶ್ಯರೂಪದಿಂದ ಬಾಣವರ್ಷವನ್ನು ಕರೆದು, ಕಪಿವೀರರೆಲ್ಲಾ ಕಕ್ಕಾಬಿಕ್ಕಿ ಆಗುವಂತೆ ಮಾಡಿದಾಗ, ಅವನ ಮೋಸಕೃತ್ಯವನ್ನು ವಿಭೀಷಣನು ಕಪಿಗಳಿಗೆಲ್ಲಾ ತಿಳಿಸಿ, ಧೈರ್ಯದಿಂದಿರುವಂತೆ ಸಮಾಧಾನಪಡಿಸುವನು. ಇಂದ್ರಜಿತ್ತುವಿನ ದುಷ್ಕೃತ್ಯವನ್ನು ಸಹಿಸಲಾರದ ವಿಭೀಷಣನು ತಾನೇ ಅವನನ್ನು ಕೊಲ್ಲಲು ಬಿಲ್ಲು ಬಾಣಗಳನ್ನು ತೆಗೆದುಕೊಳ್ಳುವನು. ಆದರೆ, ತನ್ನ ಅಣ್ಣನ ಮಗನಾದವನನ್ನು ತಾನೇ ಕೊಲ್ಲಬೇಕಲ್ಲ ಎಂಬ ಧರ್ಮಸಂಕಟವುಂಟಾಗಿ ಅವನಿಗೆ ಕಣ್ಣಿನಲ್ಲಿ ನೀರು ತುಂಬಿ ಕಾಣಿಸ

ದಂತಾಗುವುದು. ಕೂಡಲೆ, ಅವನು ಲಕ್ಷ್ಮಣನಿಗೆ ಉಪಾಯ ಹೇಳಿ ಕೊಟ್ಟು ಇಂದ್ರಜಿತ್ತನ್ನು ಕೊಲ್ಲಿಸುವನು. ಮಾಯಾಸೀತಾ ಪ್ರಕರಣದ ಮೋಸವನ್ನು ರಾಮ ಲಕ್ಷ್ಮಣರಿಗೆ ವಿವರಿಸಿ ಸಮಾಧಾನಪಡಿಸುವನು. ರಾಮ ರಾವಣರ ಯುದ್ಧಕಾಲದಲ್ಲಿ ಕೂಡ, ರಾವಣನ ಎದೆಗೆ ಗುರಿಯಿಟ್ಟು ಬಾಣದಿಂದ ಹೊಡೆದು ಕೊಲ್ಲುವಂತೆ ವಿಭೀಷಣನು ಶ್ರೀರಾಮನಿಗೆ ಸೂಚನೆ ಕೊಡುವನು. ಹೀಗೆ ತನ್ನ ಪ್ರತಿಯೊಂದು ಕಾರ್ಯದಿಂದ ವಿಭೀಷಣನು ಧರ್ಮಸಂಸ್ಥಾಪನಾಕಾರ್ಯಕ್ಕೆ ಸಹಾಯ ಮಾಡುವನು. ತನ್ನ ಸೇವೆ, ಸಮಯೋಚಿತ ಎಚ್ಚರಿಕೆ, ಸಕಾಲದ ಸುಲಭೋಪಾಯ, ಸಹಾಯಕ ಸೂಚನೆ, ಶ್ರದ್ಧಾಭಕ್ತಿಯುತ ನಿವೇದನೆ—ಇವೇ ಮುಂತಾದ ಸಾಧನೆಗಳನ್ನು ಕೊಟ್ಟು, ಶ್ರೀರಾಮನಿಗೆ ನೆರವಾಗುವನು. ಹೀಗಿರುವಾಗ, ಅವನನ್ನು ದ್ರೋಹಿ ಎಂದು ಕರೆಯುವುದು ಸರಿಯಲ್ಲ.

ವಿಭೀಷಣನು ತನ್ನ ಅಣ್ಣನಿಂದ ತಿರಸ್ಕೃತನಾಗಿ, ಲಂಕೆಯನ್ನು ಬಿಟ್ಟು ರಾಜ್ಯದಾಸೆಯಿಂದ ಶತ್ರುಪಕ್ಷವನ್ನು ಸೇರಿದ; ಹಾಗೆ ಅವನಿಗೆ ರಾಜ್ಯ ದಾಹವಿಲ್ಲದ ಪಕ್ಷಕ್ಕೆ ಶ್ರೀರಾಮನಿಂದ ಭಾವೀ ಲಂಕಾರಾಜ್ಯದ ಪಟ್ಟಾಭಿಷೇಕವನ್ನು ಏಕೆ ಮಾಡಿಸಿಕೊಂಡನೆಂದು ಕೆಲವರು ಆಕ್ಷೇಪಿಸುತ್ತಾರೆ. ಇದೂ ಕೂಡ ಹುರುಳಿಲ್ಲದ ವಾದ. ವಿಭೀಷಣನು ಶ್ರೀರಾಮನ ಬಳಿಗೆ ಬಂದು ಶರಣ್ಯನಾದಾಗ, ರಾಜ್ಯಾಭಿಲಾಷೆ ನಿಜವಾಗಿ ಅವನಲ್ಲಿರಲಿಲ್ಲ. ನೇರವಾಗಿ ಶ್ರೀರಾಮನನ್ನು ಕುರಿತು ಪ್ರಾರ್ಥಿಸುವುದಕ್ಕೂ ಅವನು ಹಿಂಜರಿಯುತ್ತಾನೆ. ಮೊದಲು ಶ್ರೀರಾಮನ ಪರಿವಾರದವರನ್ನು ಪ್ರಾರ್ಥಿಸೋಣ. ಅವರು ಶ್ರೀರಾಮನಲ್ಲಿ ಹೋಗಿ ನಿವೇದಿಸಲಿ. ಈ ಉಪಾಯ ಫಲಿಸಿದರೆ ಸರಿ. ಹಾಗಿಲ್ಲದಿದ್ದರೆ, ಆಮೇಲೆ ಶ್ರೀರಾಮನನ್ನೇ ಪ್ರತ್ಯಕ್ಷವಾಗಿ ಕಂಡು ಪ್ರಾರ್ಥಿಸೋಣ ಎಂಬುದಾಗಿ ವಿಭೀಷಣನು ಯೋಚಿಸಿರಬಹುದು. ಒಂದುಪಕ್ಷ ಮೊದಲೇ ತಾನು ಅವನಲ್ಲಿಗೆ ಹೋಗಿ ಪ್ರಾರ್ಥಿಸಿ, ಅವನು ನಿರಾಕರಿಸಿಬಿಟ್ಟರೆ ತನ್ನ ಸರ್ವನಾಶವಾಗುವುದಲ್ಲಾ! ಎಂಬ ಭಯವೂ ಅವನಲ್ಲಿ ಹುಟ್ಟಿರಬೇಕು. ಆದುದರಿಂದ ತನ್ನ ಕಾರ್ಯಸಾಧನೆಗೆ ಇನ್ನೊಂದು ಅವಕಾಶವನ್ನಿಟ್ಟುಕೊಂಡು, ವಿಭೀಷಣನು ಸುಗ್ರೀವಾದಿ ಪ್ರಮುಖರನ್ನು ಮೊದಲು ಪ್ರಾರ್ಥಿಸುವನು. ವಿಭೀಷಣನ ವಿಷಯವೆಲ್ಲಾ

ಶ್ರೀರಾಮನಿಗೆ ತಿಳಿದಿದ್ದರೂ ಕೂಡ, ಸುಗ್ರೀವಾದಿಗಳ ಅಭಿಪ್ರಾಯ ತಿಳಿದು ಕೊಳ್ಳುವನು. ಆದರೆ ಅವರ ಸಲಹೆಯಂತೆ ನಡೆಯುವುದಿಲ್ಲ. ಒಂದು ಪಕ್ಷ ತನ್ನ ಶತ್ರುವಾದ ರಾವಣನೇ ಬಂದು ಶರಣು ಹೋದರೂ ತಾನು ಅವನನ್ನು ಕ್ಷಮಿಸಬೇಕಾಗಿರುವಾಗ, ಇನ್ನು ವಿಭೀಷಣನ ಪ್ರಾರ್ಥನೆಯನ್ನು ಅಂಗೀ ಕರಿಸಬೇಡವೇ ಎಂಬುದು ಶ್ರೀರಾಮನ ಮತ. ಕರೆದುಕೊಂಡು ಬರುವಂತೆ ತನ್ನ ಆಪ್ತರಿಗೆ ಅವನು ತಿಳಿಸುವನು.

ವಿಭೀಷಣನಿಂದ ವಿಚಾರವನ್ನೆಲ್ಲಾ ತಿಳಿದು ಲಂಕಾರಾಜ್ಯದ ಭಾವೀ ರಾಜನನ್ನಾಗಿ ಭಾವಿಸಿ ಅವನಿಗೆ ಪಟ್ಟಾಭಿಷೇಕ ಮಾಡುವನು. ರಾವಣ ನನ್ನು ಸಮೂಲವಾಗಿ ತಾನು ನಾಶಮಾಡಿದಾಗ, ಲಂಕೆಗೆ ರಾಜರಿಲ್ಲದೆ ಅನಾಥವಾಗಿ ಬಿಡುವುದು; ಅಂತಹ ಪರಿಸ್ಥಿತಿ ಬರಬಾರದು. ರಾಜವಂಶಸ್ಥ ನಾದ ವಿಭೀಷಣನು ರಾಜತ್ವವನ್ನು ನಿರಾಕರಿಸಬಾರದು. ಹೀಗೆ ಮಾಡು ವುದು ಧರ್ಮಕ್ಕೆ ವಿರೋಧ ಎಂದು ಹೇಳಿ, ಶ್ರೀರಾಮನು ವಿಭೀಷಣನಿಗೆ ಪಟ್ಟಾಭೀಷೇಕ ಮಾಡುವನು. ತನಗೆ ಇಷ್ಟವಿಲ್ಲದಿದ್ದರೂ, ಶ್ರೀರಾಮನ ಬಲವಂತಕ್ಕೆ ವಿಭೀಷಣನು ಸಮ್ಮತಿಸಲೇ ಬೇಕಾಯಿತು. ತಾನಾಗಿಯೇ ಬಂದು ರಾಜ್ಯಲಾಭಕ್ಕಾಗಿ ವಿಭೀಷಣನು ರಾಮನನ್ನು ಎಂದೂ ಯಾಚಿಸಿ ದವನಲ್ಲ. ಹಾಗೆ ತಿಳಿಯುವುದೂ ಕೂಡ ಮಹಾಪಾಪ. ಧರ್ಮಾತ್ಮರ ವಿಷಯದಲ್ಲಿ ಅಪಚಾರವೆಸಗಬಾರದು. ವಿಭೀಷಣನು ಮಹಾ ಧರ್ಮಿಷ್ಠ. ಧರ್ಮರಕ್ಷಣೆಗೆ ನೆರವಾದ. ಅಧರ್ಮನಾಶಕ್ಕೆ ಸಹಾಯ ಮಾಡಿದ. ಹೀಗೆ ತಿಳಿಯಬೇಕಾದುದು ಧರ್ಮ. ವಾಲ್ಮೀಕಿಯ ಆಶಯವೂ ಇದೇ. ಆದುದ ರಿಂದ ವಿಭೀಷಣನು ಮಹಾ ಧರ್ಮಿಷ್ಠ, ಪರಮಭಕ್ತ ಮತ್ತು ಜ್ಞಾನಿ ಎಂದು ತಿಳಿಯುವುದರಲ್ಲಿ ಮಾನವರಾದ ನಮಗೆ ಅಪಾರ ಲಾಭವುಂಟು. ಅವನ ಮಾರ್ಗವನ್ನನುಸರಿಸಿದರಂತೂ ಇನ್ನೂ ಹೆಚ್ಚಿನ ಪ್ರಯೋಜನ.

ರಾಮ ರಾವಣರ ಯುದ್ಧ ಅದ್ಭುತವಾದುದು. ಶ್ರೀರಾಮನು ಮಾರೀಚನನ್ನು ಕೊಂದ ಬಾಣ ರಾವಣನನ್ನು ಏನೂ ಮಾಡಲಿಲ್ಲ. ಹಾಗೆಯೇ ಖರದೂಷಣರನ್ನು ಹತಮಾಡಿದ ಬಾಣವೂ, ವಿರಾಧನನ್ನು ವಧಿಸಿದ ಬಾಣವೂ, ವಾಲಿಯನ್ನು ನಿರ್ಮೂಲಮಾಡಿದ ಬಾಣವೂ, ಸಮುದ್ರವನ್ನು ಕುದಿಸಿದ ಬಾಣವೂ ರಾವಣನ ಮೇಲೆ ಪ್ರಯೋಗಿಸಿದಾಗ

ಅವೆಲ್ಲ ವ್ಯರ್ಥವಾದುವು. ಕಾರಣ ತಿಳಿಯದೆ ಚಿಂತಾಕ್ರಾಂತನಾದನು. ವಿಭೀಷಣನ ಸಲಹೆಯಂತೆ ಅಗಸ್ತ್ಯಮಹಾಮುನಿಯಿಂದ ತನಗೆ ಕೊಡಲ್ಪಟ್ಟ ಮಹಾಸ್ತ್ರವೊಂದನ್ನು ಶ್ರೀರಾಮನು ರಾವಣನ ಮೇಲೆ ಬಿಡುವನು. ಅದು ರಾವಣನ ಎದೆಯನ್ನು ಹೊಕ್ಕು ಚೂರು ಚೂರು ಮಾಡಿತು. ರಾವಣನು ಸತ್ತು ಬೀಳುವನು. ಆಗ ವಿಭೀಷಣನಿಗೆ ಅಪಾರ ದುಃಖವುಂಟಾಗುವುದು. ಶ್ರೀರಾಮನು ಅವನನ್ನು ಸಮಾಧಾನಪಡಿಸಿ, ಸಂಸ್ಕಾರ ನಡೆಸುವಂತೆ ಹೇಳುವನು. ಆದರೆ ವಿಭೀಷಣನು ಹಿಂಸಕನೂ, ಕ್ರೂರಿಯೂ, ಕೇಡಿಯೂ ಆದ ರಾವಣನನ್ನು ತಾನು ಹೇಗೆ ತಾನೆ ಗೌರವಿಸುವುದು. ಅದು ಯೋಗ್ಯವೇ ಎಂದು ಶಂಕಿಸುವನು.

ಆಗ ಶ್ರೀರಾಮನು ವೈರಕ್ಕೆ ಮರಣವೇ ಕೊನೆ. ಸತ್ತಮೇಲೆ ವೈರವೆಲ್ಲಿಯದು ? ಅವನು ಒಡಹುಟ್ಟಿದವನು. ಹಿಂದಿನ ದೋಷವನ್ನು ಗಮನಿಸಬಾರದು. ಇವನಿಗೆ ಸಂಸ್ಕಾರ ಮಾಡುವುದು ತನಗೆ ಪ್ರಿಯ ವಾದುದು. ಹಾಗೆ ಮಾಡುವುದು ವಿಭೀಷಣನಿಗೂ ಶ್ರೇಯಸ್ಕರ. ಇದರಿಂದ ಶಾಶ್ವತ ಕೀರ್ತಿಯುಂಟು. ಹೀಗೆಂದು ಶ್ರೀರಾಮನು ಹೇಳಿದ ಮೇಲೆ ವಿಭೀಷಣನು ರಾವಣನ ಅಪರಸಂಸ್ಕಾರವನ್ನು ಮಾಡಿದನು. ಆ ಮೇಲೆ ಎಲ್ಲರೂ ಲಂಕಾಪಟ್ಟಣವನ್ನು ಪ್ರವೇಶಿಸಿದರು.

ಶರಣಾಗತನಾದ ವಿಭೀಷಣನ ಅಭಿಮತವನ್ನು ಪೂರ್ಣಗೊಳಿಸು ವುದು ಎಲ್ಲಕ್ಕಿಂತ ಮುಖ್ಯವಾದುದೆಂದು ಶ್ರೀರಾಮನು ತಿಳಿಸುವನು. ಅವನನ್ನು ರಾವಣನ ಸಿಂಹಾಸನದಲ್ಲಿ ಕೂರಿಸಿ ಪಟ್ಟಾಭಿಷೇಕ ಮಾಡ ಬೇಕೆಂದು ಲಕ್ಷ್ಮಣನಿಗೆ ಸೂಚಿಸುವನು. ಲಕ್ಷ್ಮಣನ ಅಪ್ಪಣೆಯಂತೆ, ವಾನರವೀರರು ಕೂಡಲೆ ಪುಣ್ಯತೀರ್ಥಗಳನ್ನು ತರುವರು. ಸಮಸ್ತ, ರಾಕ್ಷಸರ ಮಧ್ಯದಲ್ಲಿ ಲಕ್ಷ್ಮಣನು ವಿಭೀಷಣನನ್ನು ಕರೆದು ತಂದು ಸಿಂಹಾ ಸನದಲ್ಲಿ ಕುಳ್ಳಿರಿಸಿ, ವೇದೋಕ್ತವಿಧಿಯಿಂದ ಪಟ್ಟಾಭಿಷೇಕ ಮಾಡುವನು.

ಆಗ ಶ್ರೀರಾಮನು, 'ವಿಭೀಷಣಾ! ನಿನಗೆ ದೊರಕಿರುವ ರಾಜ್ಯ ವನ್ನು ಸುಖವಾಗಿ ಅನುಭವಿಸು. ರಾವಣನಂತೆ ದುರಾಶೆ ಪಡಬೇಡ. ನೀನ್ ಧರ್ಮಮಾರ್ಗದಲ್ಲಿದ್ದರೆ, ದೇವೇಂದ್ರನೇ ದಂಡೆತ್ತಿಬಂದರೂ ನಿನ್ನನ್ನು ಕದಲಿಸಲಾರನು' ಎಂದು ಹೇಳುವನು. ಎಲ್ಲರೂ ಪುಷ್ಪಕವಿಮಾನದಲ್ಲಿ

ಅಯೋಧ್ಯೆಗೆ ಬರುವರು. ಶ್ರೀರಾಮ ಪಟ್ಟಾಭಿಷೇಕವಾಗುವುದು. ಶ್ರೀರಾಮನು ಸಮಸ್ತರನ್ನೂ, ಅವರವರ ಯೋಗ್ಯತೆಗೆ ತಕ್ಕಂತೆ ಸತ್ಕರಿಸಿ, ಅವರವರ ಪಟ್ಟಣಗಳಿಗೆ ಪ್ರಯಾಣಮಾಡಲು ಅನುಮತಿ ಈಯುವನು. ಹಾಗೆಯೇ ವಿಭೀಷಣನನ್ನು ಕರೆದು, 'ಓ ರಾಕ್ಷಸರಾಜಾ! ಭಕ್ತಶಿಖಾಮಣೀ! ಈ ಭೂಮಂಡಲ ಇರುವವರೆಗೆ ನೀನು ರಾಜ್ಯವಾಳುತ್ತಿರು. ನನ್ನ ಕಥೆ ಭೂಲೋಕದಲ್ಲಿ ಪ್ರಚಾರದಲ್ಲಿ ಇರುವವರೆಗೆ ನೀನು ಧರ್ಮದಿಂದ ಪ್ರಜೆಗಳನ್ನು ಪಾಲಿಸುತ್ತಿರು. ಇದು ನನ್ನ ಶಾಸನ. ಇಕ್ಷ್ವಾಕುವಂಶಕ್ಕೆ ಪರಂಪರೆಯಾಗಿ ಬಂದಿರುವ ಈ ಶ್ರೀ ರಂಗನಾಥಸ್ವಾಮಿ ವಿಗ್ರಹವನ್ನು ನಿನಗೆ ಕೊಡುವೆನು. ಇದನ್ನು ನೀನು ನಿರಂತರ ಪೂಜಿಸುತ್ತಿರು. ಸದಾ ಸೇವಿಸುತ್ತಿರು ನೀನು ಚಿರಂಜೀವಿ. ಸಮಸ್ತ ಮಂಗಳವೂ ನಿನಗುಂಟಾಗಲಿ' ಎಂದು ಶ್ರೀರಾಮನು ವಿಭೀಷಣನನ್ನು ಹರಸಿದನು.

# ಹನುಮಂತ

ಸುಮೇರುಪರ್ವತ ಪ್ರದೇಶದಲ್ಲಿ ಕೇಸರಿ ಎಂಬ ರಾಜನಿದ್ದನು. ಅವನ ಹೆಂಡತಿ ಅಂಜನಾದೇವಿ. ವಾಯುದೇವನ ವರಬಲದಿಂದ ಅವಳಿಗೊಂದು ಮಗುವಾಯಿತು. ಹುಟ್ಟುವಾಗಲೇ ಮಗುವಿಗೆ ಹೆಚ್ಚು ಬಲ ಬಂದಿತ್ತು. ಮಗುವನ್ನು ಮನೆಯಲ್ಲಿ ಬಿಟ್ಟು ತಾಯಿ ಉದ್ಯಾನಕ್ಕೆ ಹೋಗಿದ್ದಳು. ಆಗ ಸೂರ್ಯೋದಯ ಸಮಯ. ಮಗುವಿಗೆ ಹಸಿವಾಯಿತು. ಹೊರಕ್ಕೆ ಬಂದು ನೋಡಲು ಕೆಂಪಾಗಿ ಉಂಡೆಯಾಗಿ ಹೊಳೆಯುತ್ತಿದ್ದ ಬಾಲಸೂರ್ಯನು ಕಾಣಿಸಿದನು. ಅದನ್ನು ನೋಡಿ ಮಗುವು ಅದು ಒಂದು ಬಗೆಯ ಹಣ್ಣಾಗಿರಬೇಕೆಂದು ಊಹಿಸಿ ಅದನ್ನು ಹಿಡಿಯಲು ಆಕಾಶಕ್ಕೆ ಹಾರಿತು. ಅಂತಹ ಶಕ್ತಿಯು ವಾಯುದೇವನ ವರಬಲದಿಂದ ಮಗುವಿಗೆ ಬಂದಿತ್ತು.

ಮಗುವು ಆಕಾಶಕ್ಕೆ ಹಾಗೆ ಹಾರಿದಾಗ, ಸೂರ್ಯಕಿರಣಗಳು ಸುಡದಂತೆ ವಾಯುದೇವನು ತಣ್ಣಗೆ ಬೀಸಿದನು. ಅರಿಯದ ಮಗುವೆಂದು ಸೂರ್ಯನೂ ಕೂಡ ಕರುಣೆ ತೋರಿಸಿದನು. ತನ್ನ ಕಿರಣ ಶಾಖವನ್ನು ಬೀರಲಿಲ್ಲ. ಹನುಮಂತನು ಹೀಗೆ ಹಾರಿದ ದಿವಸ ಸೂರ್ಯಗ್ರಹಣ, ಅದೇ ಸಮಯಕ್ಕೆ ರಾಹುವು ಸೂರ್ಯನನ್ನು ಹಿಡಿಯಲು ಬಂದಿದ್ದನು. ಹನುಮಂತನು ಬಂದಿದ್ದು ರಾಹುವಿಗೆ ಕೋಪವನ್ನುಂಟುಮಾಡಿತು. ಇನ್ನಾರೋ ಬಂದಿದ್ದಾರೆ, ತಾನು ಸೂರ್ಯನನ್ನು ಹಿಡಿಯಲಾಗಲಿಲ್ಲವೆಂದು ರಾಹುವು ದೇವೇಂದ್ರನಲ್ಲಿ ದೂರು ಹೇಳಿದನು. ಇಂದ್ರನಿಗೆ ಆಶ್ಚರ್ಯವಾಯಿತು. ಐರಾವತವನ್ನೇರಿ, ವಜ್ರಾಯುಧವನ್ನು ಹಿಡಿದು ರಾಹುವಿನೊಡನೆ, ಸೂರ್ಯನ ಬಳಿಗೆ ದೇವೇಂದ್ರನು ಬಂದನು. ಗುಂಡಾಗಿದ್ದ ರಾಹುವನ್ನು ನೋಡಿ ಅದೂ ಒಂದು ಬಗೆಯ ಹಣ್ಣೇ ಇರಬೇಕೆಂದು, ಹನುಮಂತನು ಸೂರ್ಯನನ್ನು ಬಿಟ್ಟು ರಾಹುವನ್ನು ಹಿಡಿಯಲು ಹೋದನು. ಅವನು ಭಯದಿಂದ ದೇವೇಂದ್ರನ ಮರೆ ಹೊಕ್ಕನು. ಇಂದ್ರನ ಐರಾವತವನ್ನು ಕಂಡು, ಆಶ್ಚರ್ಯದಿಂದ ಅದನ್ನು ಹಿಡಿಯಲು ಹನುಮಂತನು

ಮುಂದೆ ಬಂದನು. ಮಗುವಿನ ವೇಗವೂ, ರೂಪೂ ಭಯಂಕರವಾಗಿತ್ತು. ಇಂದ್ರನು ಹಿಂದಕ್ಕೆ ಹೋಗುವಂತೆ ಮಗುವಿಗೆ ಎಷ್ಟು ಹೇಳಿದರೂ ಅದು ಕೇಳದೇ ಮುಂದಕ್ಕೆ ಬಂದು ಆನೆಯನ್ನು ಹಿಡಿಯಲು ಯತ್ನಿಸಿತು. ಇಂದ್ರನು ಕೋಪದಿಂದ ಆ ಮಗುವಿಗೆ ವಜ್ರಾಯುಧದಲ್ಲಿ ಒಂದೇಟು ಕೊಟ್ಟನು. ಆ ಪೆಟ್ಟಿನ ನೋವನ್ನು ತಾಳಲಾರದೇ ಮಗುವು ಒಂದು ಪರ್ವತದ ತುದಿಯ ಬಂಡೆಯಮೇಲೆ ಬಿದ್ದುಬಿಟ್ಟಿತು. ಇದರಿಂದ ಆ ಮಗುವಿನ ಎಡಪಕ್ಕದ ದವಡೆಗೆ ಬಲವಾದ ಪೆಟ್ಟು ಬಿದ್ದು ಚಪ್ಪಟೆ ಆಯಿತು. ಜೀವ ಹೋಗುವ ಸ್ಥಿತಿಗೆ ಬಂದಿತು.

ಇದನ್ನು ಕಂಡು ವಾಯುವಿಗೆ ಅಪಾರ ಕೋಪಬಂದಿತು. ಹಾಗೆ ಬಿದ್ದ ಮಗುವನ್ನು ವಾಯುವು ಎತ್ತಿಕೊಂಡು, ಹತ್ತಿರವಿದ್ದ ಗುಹೆಯನ್ನು ಸೇರಿಬಿಟ್ಟನು. ಜಗತ್ತಿನಲ್ಲಿ ಗಾಳಿ ಸಂಚಾರವಿಲ್ಲದಂತಾಯಿತು. ಗಾಳಿ ಇಲ್ಲದೆ ಪ್ರಾಣಿಗಳು ಬದುಕುವುದೆಂತು ? ವಾಯುವಿನ ಕೋಪದಿಂದ, ಜಗತ್ತಿನ ಪ್ರಾಣಿಕೋಟಿಗೆ ನ ರ ಕ ಯಾ ತ ನೆ ಬಂತು. ದೇವ, ದಾನವ ಮಾನವರಾದಿಯಾಗಿ, ಎಲ್ಲರೂ ಕಷ್ಟ ಸಹಿಸಲಾರದೆ ಬ್ರಹ್ಮನಲ್ಲಿ ಮೊರೆ ಇಟ್ಟರು. ಸೃಷ್ಟಿಮಾಡಿದ ಬ್ರಹ್ಮನು ಕಾಪಾಡದಿದ್ದರೆ, ಎಲ್ಲವೂ ನಾಶ ವಾಗುವುದೆಂದು ಅವರು ಬೇಡಿದರು.

ವಾಯುವಿನ ಕೋಪಕ್ಕೆ ಕಾರಣ ಬ್ರಹ್ಮನಿಗೆ ತಿಳಿಯದಿರಲಿಲ್ಲ. ತನಗೆ ಶರೀರವಿಲ್ಲದಿದ್ದರೂ, ಎಲ್ಲ ಶರೀರಗಳನ್ನೂ ವಾಯುವು ರಕ್ಷಿಸುತ್ತಿದ್ದನು. ಅವನೇ ಎಲ್ಲರ ಪ್ರಾಣ. ಪ್ರಾಣದೇವರೇ ಅವನು. ಅವನೇ ಎಲ್ಲ ಜೀವಿಗಳ ಸುಖ ಸ್ವರೂಪ. ಅವನಿಲ್ಲದಿದ್ದರೆ, ಯಾವ ಪ್ರಾಣಿಗೆ ತಾನೆ ನೆಮ್ಮದಿ ಇದ್ದೀತು ? ವಾಯುದೇವನನ್ನು ಪ್ರಸನ್ನನನ್ನಾಗಿ ಮಾಡಿಕೊಳ್ಳಬೇಕೆಂದು ಬ್ರಹ್ಮದೇವನು ಅವರನ್ನೆಲ್ಲಾ ಕರೆದುಕೊಂಡು ಗುಹೆಯ ಬಳಿ ಬಂದನು. ಸುವರ್ಣದಂತೆ ಹೊಳೆಯುತ್ತಿದ್ದ ಮಗುವನ್ನು ಮುಂದೆ ಇಟ್ಟುಕೊಂಡು, ಪುತ್ರಶೋಕದಿಂದ ಕೊರಗುತ್ತಿದ್ದ ವಾಯುವನ್ನು ಕಂಡರು. ಬ್ರಹ್ಮನನ್ನೂ ಇತರ ದೇವತೆಗಳನ್ನೂ ನೋಡಿದ ಕೂಡಲೇ, ವಾಯುದೇವನು ಮಗುವ ನ್ನೆತ್ತಿ ಬ್ರಹ್ಮನ ಪಾದದ ಮುಂದಿಟ್ಟು 'ಓ, ಬ್ರಹ್ಮದೇವಾ ! ನೀನು ತ್ರಿಲೋಕಾಧಿಪತಿಯು, ತ್ರಿಗುಣಾತ್ಮಕನು, ಸೃಷ್ಟಿಕರ್ತನು, ಇಗೋ ನಿನಗೆ

ನಮಸ್ಕಾರ ಮಾಡುವೆನು' ಎಂದನು. ಬ್ರಹ್ಮನು ಮಗುವಿನ ಮೈಯನ್ನು ಒಂದಾವರ್ತಿ ತನ್ನ ಕೈಯಿಂದ ನೇವರಿಸಲು ಮಗುವಿಗೆ ಪ್ರಾಣ ಕೂಡಿಕೊಂಡಿತು. ಬಾಡಿದ ಸಸಿಗೆ ನೀರೆರೆದಂತಾಯಿತು. ಮಗುವು ಬದುಕಿದ್ದುದನ್ನು ಕಂಡು ವಾಯುದೇವನಿಗೆ ಸಂತೋಷವಾಯಿತು. ಜಗತ್ತಿನಲ್ಲಿ ಗಾಳಿ ಬೀಸುವುದಕ್ಕೆ ಪ್ರಾರಂಭವಾಯಿತು. ಆಗ ಎಲ್ಲ ಪ್ರಾಣಿಗಳಿಗೂ ಉಲ್ಲಾಸವಾಯಿತು.

ಅಲ್ಲಿಗೆ ಬಂದಿದ್ದ ಇಂದ್ರಾಗ್ನಿ, ವರುಣ ಕುಬೇರರನ್ನೂ, ಅಷ್ಟದಿಕ್ಪಾಲಕರನ್ನೂ ಬ್ರಹ್ಮನು ಕರೆದು, ಮುಂದೆ ವಾಯುಪುತ್ರನಿಂದ ಅದ್ಭುತಕಾರ್ಯ ನಡೆಯಬೇಕಾಗಿದೆ ಎಂದೂ, ಲೋಕಕಲ್ಯಾಣವಾಗಬೇಕಾಗಿದೆ ಎಂದೂ ತಿಳಿಸಿ ಮಗುವನ್ನು ಹರಸುವಂತೆ ಹೇಳಿದನು. ಮೊದಲು ದೇವೇಂದ್ರನು ಮುಂದೆ ಬಂದು, ತನ್ನ ವಜ್ರಾಯುಧದ ಪೆಟ್ಟಿಗೆ ಮಗುವು ಸಿಲುಕಿದುದರಿಂದ, ಇವನ ಇಡೀ ದೇಹವು ವಜ್ರಾಯುಧದಂತೆ ಗಟ್ಟಿಯಾಗಿ, ಇವನಿಗೆ ಮರಣವುಂಟಾಗದಿರಲಿ ಎಂದು ವರ ಕೊಟ್ಟನು. ಹನುಮಂತನೆಂಬ ಹೆಸರಿನಿಂದ ಇವನ ಕೀರ್ತಿ ಜಗತ್ತಿಗೆಲ್ಲ ಹರಡಲಿ ಎಂದನು. ಸೂರ್ಯದೇವನು ತನ್ನ ತೇಜಸ್ಸಿನ ನೂರನೆಯ ಒಂದು ಪಾಲು ಇವನಿಗುಂಟಾಗಲಿ. ಪ್ರಾಪ್ತ ವಯಸ್ಸು ಇವನಿಗೆ ಬರುವುದರೊಳಗೆ, ಸಮಸ್ತ ಶಾಸ್ತ್ರಗಳ ಅರಿವು ಇವನಿಗುಂಟಾಗಲಿ, ಇವನು ಉತ್ತಮೋತ್ತಮ ವಾಗ್ಮಿಯಾಗಲಿ ಎಂದು ಹರಸಿದನು. ವರುಣನು, ಲಕ್ಷಾಂತರ ವರುಷಗಳಾದರೂ, ಇವನಿಗೆ ಜಲ ಅಥವಾ ಪಾಶದಿಂದ ಮರಣವುಂಟಾಗದಿರಲಿ ಎಂದನು

ಅನಂತರ ಯಮನು ಇವನಿಗೆ ಯಾವ ರೋಗಭಯ-ವುಂಟಾಗದಿರಲಿ ಶಸ್ತ್ರಾಸ್ತ್ರಗಳು ಇವನಿಗೆ ಯಾವ ಕೆಡುಕನ್ನುಂಟುಮಾಡದಿರಲಿ ಎಂದು ವರಕೊಟ್ಟನು. ಕುಬೇರ, ಶಂಕರರೂ ಕೂಡ ಈ ಮಗುವು ಸ್ಥಿರಜೀವಿಯಾಗಿರಲಿ ಎಂದು ಹರಸಿದರು. ದೇವಶಿಲ್ಪಿಯಾದ ವಿಶ್ವಕರ್ಮನು, ತಾನು ದೇವತೆಗಳಿಗೆ ಮಾಡಿಕೊಟ್ಟಿರುವ ಆಯುಧಗಳೊಂದರಿಂದಲೂ ಇವನಿಗೆ ಮರಣವುಂಟಾಗದಿರಲಿ ಎಂದು ವರ ಕೊಟ್ಟನು. ಹೀಗೆ ರುದ್ರಾದಿ ದೇವತೆಗಳಿಂದ ವರ ಪಡೆದ ಮಗುವನ್ನು ವಾಯುವು ಅಂಜನಾದೇವಿಗೆ ಒಪ್ಪಿಸಿದನು. ಮಗುವು ಅರಣ್ಯದಲ್ಲಿ ತಾಯಿ ತಂದೆಗಳ ಆಶ್ರಯದಲ್ಲಿ ಬೆಳೆಯುತ್ತಿತ್ತು.

ಹೀಗಿರುವಾಗ ಆಂಜನೇಯನು ಹುಡುಗಾಟಿಕೆಗಾಗಿ, ಆಶ್ರಮವಾಸಿಗಳಿಗೆ ಉಪದ್ರವ ಕೊಡಲಾರಂಭಿಸಿದನು. ಹೋಮಾಗ್ನಿಯನ್ನು ಆರಿಸುವುದು. ಹೋಮದ ತುಪ್ಪವನ್ನು ಚೆಲ್ಲುವುದು. ಹರವಿದ ನಾರುಮಡಿಯನ್ನು ಹರಿಯುವುದು. ಮಡಕೆಗಳನ್ನು ಒಡೆಯುವುದು. ಇವನ ಕಪಿಸಹಜ ಚೇಷ್ಟೆಗಳನ್ನು ನೋಡಿ ಅಂಜನಾದೇವಿಯು ಆಗಾಗ್ಯೆ ಕೋಪಿಸಿಕೊಳ್ಳುತ್ತಿದ್ದಳು.

ಹೀಗಿರುವಾಗ ಒಂದು ದಿವಸ, ಭೃಗು, ಆಂಗಿರಸ ಋಷಿಗಳಿಗೆ ಆಂಜನೇಯನ ಚೇಷ್ಟೆಗಳು ಸಹಿಸಲಸಾಧ್ಯವಾಯಿತು. ದೇಹದ ಕೊಬ್ಬಿನಿಂದ ಇವನು ಹೀಗೆ ಮಾಡುತ್ತಿರುವನು. ಇವನ ಶಕ್ತಿ ಇಷ್ಟೇ ಎಂದು ಇವನಿಗೆ ಇನ್ನೊಬ್ಬರು ಹೇಳುವವರಿವಿಗೆ, ಆ ಶಕ್ತಿ ಅವನಿಗೆ ಅರಿಯದೇ ಹೋಗಲಿ ಎಂದು ಶಾಪ ಕೊಟ್ಟರು. ಅಂದಿನಿಂದ ಆಂಜನೇಯನು ಇತರರಿಗೆ ಹಿಂಸೆ ಕೊಡುವುದನ್ನು ಬಿಟ್ಟುಬಿಟ್ಟನು.

ಅದೇ ಕಾಡಿನಲ್ಲಿ ಋಕ್ಷರಜಸ್ಸೆಂಬ ವಾನರ ರಾಜನೊಬ್ಬನಿದ್ದನು. ಅವನಿಗೆ ವಾಲಿ, ಸುಗ್ರೀವರೆಂಬ ಇಬ್ಬರು ಮಕ್ಕಳಿದ್ದರು. ಇವರಿಬ್ಬರೂ ವೀರರು. ಅಪಾರ ಶಕ್ತಿಯುಳ್ಳವರು. ಋಕ್ಷರಜಸ್ಸು ಕಾಲವಾದಮೇಲೆ ವಾಲಿಗೆ ರಾಜ್ಯಾಭಿಷೇಕವಾಯಿತು. ಸುಗ್ರೀವನು ಯುವರಾಜನಾದನು. ಆಂಜನೇಯನು ಸುಗ್ರೀವನ ಸ್ನೇಹಿತನಾದನು. ಅಗ್ನಿವಾಯುಗಳಂತೆ ಇವರಿಬ್ಬರ ಸ್ನೇಹ ಗಾಢವಾಗಿ ಬೆಳದಿತ್ತು.

ಆಂಜನೇಯನಿಗೆ ಪ್ರಾಪ್ತವಯಸ್ಸು ಬಂದಕೂಡಲೇ, ದೇವತೆಗಳ ವರಬಲದಿಂದ, ಎಲ್ಲ ಸದ್ಗುಣಗಳೂ ತಾವಾಗಿಯೇ ತಲೆದೋರಿದವು. ಗಾಂಭೀರ್ಯ, ಚಾತುರ್ಯ, ವೀರ್ಯ, ಮಾಧುರ್ಯಾದಿಗಳಲ್ಲಿಯೂ, ನ್ಯಾಯಾನ್ಯಾಯಗಳ ವಿಮರ್ಶೆಯಲ್ಲಿಯೂ, ಅವನನ್ನು ಮೀರಿಸುವವರು ಇನ್ನಾರೂ ಇಲ್ಲದಂತಾಯಿತು. ಆಂಜನೇಯನು ಸೂರ್ಯನಿಂದ ವ್ಯಾಕರಣ ಶಾಸ್ತ್ರ ಉಪದೇಶ ಪಡೆದನು. ಸೂತ್ರ, ವೃತ್ತಿ, ಪದ, ಪದಾರ್ಥ ವಿವರಣೆ—ಇವುಗಳಲ್ಲಿ ಮಹತ್ತಾದ ಪಾಂಡಿತ್ಯ ಪಡೆದನು. ನವವ್ಯಾಕರಣ ಪಂಡಿತನೆನ್ನಿಸಿಕೊಂಡನು. ಸಮಸ್ತ ವಿದ್ಯೆಗಳಲ್ಲಿಯೂ, ದೇವಗುರುವಾದ ಬೃಹಸ್ಪತಿಯನ್ನೂ ಮೀರಿಸುವಷ್ಟು ಜ್ಞಾನವಂತನಾದನು. ಹೀಗೆ ವಿದ್ಯೆ

ಯಲ್ಲಿ, ಜ್ಞಾನದಲ್ಲಿ, ಪಾಂಡಿತ್ಯದಲ್ಲಿ, ವೀರ್ಯದಲ್ಲಿ, ಶೌರ್ಯದಲ್ಲಿ, ಧೈರ್ಯದಲ್ಲಿ, ವೇಗದಲ್ಲಿ, ಭಕ್ತಿಯಲ್ಲಿ, ವಾಕ್ಪಟುತ್ವದಲ್ಲಿ—ಆಂಜನೇಯನಿಗಿಂತ ಉತ್ತಮರಾದವರು ಜಗತ್ತಿನಲ್ಲಿ ಇನ್ನಾರೂ ಇಲ್ಲದಂತಾಯಿತು.

ಒಂದು ದಿನ ಋಷ್ಯಮೂಕಪರ್ವತದಲ್ಲಿ ಆಂಜನೇಯ ಸುಗ್ರೀವರು ಕುಳಿತಿದ್ದಾಗ, ರಾಮಲಕ್ಷ್ಮಣರಿಬ್ಬರೂ ಬರುತ್ತಿರುವುದನ್ನು ಕಾಣುವರು. ಸುಗ್ರೀವನಿಗೂ, ತನ್ನ ಅಣ್ಣನಾದ ವಾಲಿಗೂ ವೈರವುಂಟಾಗಿ ವಾಲಿಯಿಂದ ಓಡಿಸಲ್ಪಟ್ಟವನಾಗಿ ಅಲ್ಲಿಗೆ ಬಂದಿರುವನು. ರಾಮಲಕ್ಷ್ಮಣರನ್ನು ದೂರದಲ್ಲಿ ಕಂಡು, ವಾಲಿಯಿಂದ ಕಳುಹಿಸಲ್ಪಟ್ಟ ಗೂಢಚಾರರಿರಬಹುದೋ ಏನೋ ಎಂಬ ಶಂಕೆಯುಂಟಾಗುವುದು ಅವನಿಗೆ. ಆಂಜನೇಯನು ಅದನ್ನು ನಂಬಲಿಲ್ಲ. ಅವರು ಯಾರೆಂಬುದನ್ನು ತಿಳಿಯಲು ಅವರ ಹತ್ತಿರ ಬರುವನು. ಅತಿ ಮೃದುವಾದ ಮತ್ತು ಇಂಪಾದ ಮಾತುಗಳಿಂದ, ವಿನಯವಾಗಿ ಹೀಗೆ ಹೇಳುವನು, 'ಸ್ವಾಮಿ, ತಾವು ಯಾರು ? ತಮ್ಮ ದೇಹಸೌಂದರ್ಯ, ಅಂಗಾಂಗಗಳೆಲ್ಲ ದೇವಕುಮಾರರನ್ನು ಹೋಲುತ್ತಿರುವುದು. ಅಪೂರ್ವ ಶೋಭೆಯನ್ನುಂಟುಮಾಡುತ್ತಿರುವುದು ತಮ್ಮ ನೋಟ. ಇಂದ್ರಾಯುಧಕ್ಕೆ ಸಮಾನವಾದ ಬಿಲ್ಲು ಬಾಣಗಳನ್ನು ತಾವು ಧರಿಸಿರುವಿರಿ. ನಿಮ್ಮ ರೂಪು ಲಾವಣ್ಯಗಳು ಒಬ್ಬರನ್ನೊಬ್ಬರನ್ನು ಹೋಲುತ್ತಿವೆ. ದೇವಲೋಕವನ್ನು ಬಿಟ್ಟುಬಂದಿರುವ ದೇವಕುಮಾರರೋ ನೀವು? ಅಥವಾ ಚಂದ್ರಸೂರ್ಯರಾಗಿ ಭೂಮಿಗೆ ಬಂದಿಳಿದಿದ್ದೀರೋ ? ನಾರುಮಡಿಯನ್ನುಟ್ಟು ತಾಪಸಿಗಳ ವೇಷದಲ್ಲಿ ನೀವಿರಲು ಕಾರಣವೇನು? ವೀರಾಗ್ರಣಿಗಳೇ ! ನಾನು ಸುಗ್ರೀವನ ಕಡೆಯವನು. ಅವನು ಕಪಿಗಳ ರಾಜ: ಅವನು ನನ್ನನ್ನು ತಮ್ಮ ಬಳಿಗೆ ಕಳುಹಿಸಿರುವನು. ನನ್ನ ಹೆಸರು ಹನುಮಂತ. ನಾನು ಅವನ ಮಂತ್ರಿ. ಇಷ್ಟ ಬಂದಕಡೆಗೆ ಹೋಗಬಲ್ಲೆ. ಯಾವ ರೂಪಬೇಕಾದರೂ ಧರಿಸಬಲ್ಲೆ. ತಾಪಸವೇಷದಲ್ಲಿರುವ ನಿಮ್ಮನ್ನು ಕಂಡು, ನಾನೂ ಕೂಡ ಸನ್ಯಾಸಿಯ ವೇಷದಲ್ಲಿ ನಿಮ್ಮ ಸಂಗತಿ ತಿಳಿಯಲು ಬಂದಿದ್ದೇನೆ' ಎಂದನು.

ಹನುಮಂತನ ಮಾತುಗಳನ್ನು ಕೇಳಿ ಶ್ರೀರಾಮನಿಗೆ ಅಪಾರ ಸಂತೋಷವಾಯಿತು. ತಮ್ಮನಾದ ಲಕ್ಷ್ಮಣನಿಗೆ, ಹನುಮಂತನ ಮೇಲ್ಮೆ

ಯನ್ನು ವಿವರಿಸುವನು. ಹನುಮಂತನು ಸುಗ್ರೀವನ ಮಂತ್ರಿಯಂತೆ. ಬಹಳ ನಿಪುಣನಂತೆ ತೋರುವುದು. ಇವನ ಮಾತುಗಳೇ ಇದಕ್ಕೆ ನಿದರ್ಶನವಾಗಿವೆ. ಇವನು ಋಗ್ವೇದದಲ್ಲಿ ಶಿಕ್ಷಿತನಾಗಿ, ಯಜುರ್ವೇದವನ್ನು ಅಧ್ಯಯನಮಾಡಿ, ಸಾಮವೇದವನ್ನು ಗಾನಮಾಡಿದಂತಿದೆ. ಹಾಗಿಲ್ಲದಿದ್ದರೆ, ಹೀಗೆ ಮಾತನಾಡ ಲಾರ. ಇವನ ಮೃದುವಾದ, ಶುದ್ಧವಾದ ವಾಕ್ಯಗಳೇ ಇವನು ವ್ಯಾಕರಣ ಶಾಸ್ತ್ರವನ್ನೂ, ವೇದವೇದಾಂಗಗಳನ್ನೂ ತಿಳಿದಿರುವುದಕ್ಕೆ ಗುರುತು. ಇವನು ಮಾತನಾಡುವಾಗ ಇವನ ಮುಖದಲ್ಲಿ, ಕಣ್ಣುಗಳಲ್ಲಿ, ಹಣೆಯಲ್ಲಿ, ಯಾವುದೇ ಅವಯವದಲ್ಲಿ ಯಾವ ವಿಕಾರ ಚೇಷ್ಟೆಯೂ ಇಲ್ಲ. ಇವನ ಧ್ವನಿ ವ್ಯಾಕರಣ ಸಂಸ್ಕಾರದಿಂದ ಶಬ್ದಶುದ್ಧಿ ಹೊಂದಿದೆ. ತಮ್ಮನ್ನು ಹೊಗಳುವ ವಿಧಾನದಲ್ಲಿಯೇ, ತಮ್ಮ ಕುಲಗೋತ್ರಗಳನ್ನೆಲ್ಲಾ ಕೇಳಿರು ವನು. ಇವನೊಬ್ಬ ಸಮರ್ಥ ಪುರುಷನಂತಿದೆ. ಯಾವ ರಾಜನ ಹತ್ತಿರ ಇವನಿರುವನೋ ಅವನ ಎಲ್ಲ ಕಾರ್ಯಸಿದ್ಧಿಯೂ ಆಗುವುದು.

ಅನಂತರ ಹನುಮಂತನು ಶ್ರೀರಾಮನಿಗೂ, ಸುಗ್ರೀವನಿಗೂ ಸಖ್ಯ ಮಾಡಿಸುವನು. ಈ ಸ್ನೇಹದ ಗುರುತಿಗಾಗಿ ಶ್ರೀರಾಮನು ವಾಲಿ ಯನ್ನು ಕೊಂದು ಸುಗ್ರೀವನಿಗೆ ಕಪಿರಾಜ ಪಟ್ಟಾಭಿಷೇಕ ಮಾಡುವನು. ಇದಕ್ಕೆ ಪ್ರತಿಯಾಗಿ, ಸುಗ್ರೀವನು, ಸೀತೆಯು ಎಲ್ಲಿರುವಳೆಂಬುದನ್ನು ಪತ್ತೆ ಹಚ್ಚುವುದಕ್ಕಾಗಿ ಹನುಮಂತನನ್ನೂ, ಇತರ ವಾನರ ವೀರರನ್ನೂ ಕಳು ಹಿಸುವನು. ಹೀಗೆ ಕಳುಹಿಸುವಾಗ ಅಂಜನೇಯನನ್ನು ಕುರಿತು ಹೀಗೆ ಹೇಳುವನು, "ಎಲೈ ! ವಾನರ ವೀರನೇ ! ನೀನು ಅದ್ಭುತಶಕ್ತಿಯುಳ್ಳವನು. ಶತ್ರುಗಳಿರುವ ಭೂಲೋಕ, ದುರ್ಗಮವಾದ ಆಕಾಶ, ಪ್ರಬಲದೇವತೆ ಗಳಿರುವ ಸ್ವರ್ಗ, ಗಂಧರ್ವ, ನಾಗ ದೈತ್ಯಲೋಕ—ಇವುಗಳಲ್ಲೆಲ್ಲಾ ಸಂಚರಿಸುವ ಶಕ್ತಿಯುಳ್ಳವನು ನೀನು. ಗಮನದಲ್ಲಿ, ವೇಗದಲ್ಲಿ ನೀನು ವಾಯುದೇವನಿಗೆ ಸಮ. ಸಮಸ್ತ ಲೋಕಗಳನ್ನೂ ನೀನು ತಿಳಿದಿರುವೆ. ನಿನಗೆ ತಿಳಿಯದ ನ್ಯಾಯನೀತಿಗಳಿಲ್ಲ. ಬಲದಲ್ಲಿ, ಬುದ್ಧಿಯಲ್ಲಿ, ಸಾಮರ್ಥ್ಯ ದಲ್ಲಿ ನಿನಗೆ ಸಮನಾರೂ ಇಲ್ಲ. ಶ್ರೀರಾಮನ ಕಾರ್ಯವನ್ನೂ ಯಶಸ್ವಿ ಯಾಗಿ ನಡೆಸುವುದಕ್ಕೆ ನಿನಗಿಂತ ಉತ್ತಮರಾದವರು ಇನ್ನೊಬ್ಬರಿಲ್ಲ. ನೀನು ಯಶಸ್ವಿಯಾಗಿ ಬಾ" ಎಂದು ಸುಗ್ರೀವನು ಹೇಳಿದನು.

ಶ್ರೀರಾಮನೂ ಕೂಡ ಹರ್ಷಿತನಾಗಿ, ಹನುಮಂತನಿಗೆ ತನ್ನ ನಾಮಾಂಕಿತದ ಉಂಗುರವನ್ನು ಅವನ ಕೈಯಲ್ಲಿಡುವನು. ಅದನ್ನ ನೋಡಿದ ತಕ್ಷಣ ಸೀತೆಗಿರುವ ಎಲ್ಲ ಭಯವೂ, ಸಂದೇಹವೂ ನಾಶ ವಾಗುವುದು. ಅವಳ ಹೆದರಿಕೆಯನ್ನು ನೀಗುವುದಕ್ಕೆ ಅದನ್ನು ಕೊಡು. ನಿನ್ನ ಕಾರ್ಯ ಜಯಪ್ರದವಾಗುವುದು ಎಂದು ಹೇಳಿಕಳುಹಿಸಿದನು.

ಆಂಜನೇಯನು ಉಂಗುರವನ್ನು ವಿನಯದಿಂದ ತೆಗೆದುಕೊಂಡು, ತಲೆಯಮೇಲಿಟ್ಟು, ನಮಸ್ಕಾರಮಾಡಿ ಹೊರಡುವನು. ಅನಂತರ ತನ್ನ ಸಂಗಡಿಗರೊಡನೆ, ಕಾಡು, ಗುಹೆ, ದುರ್ಗ ಮುಂತಾದ ಕಡೆಗಳಲ್ಲಿ ಸೀತೆ ಯನ್ನು ಹುಡುಕುವನು. ಹನುಮಂತನೊಡನೆ, ಗಜ, ಗವಾಕ್ಷ, ಗಂಧ ಮಾದನ, ಗವಯ, ನಳ, ಜಾಂಬವಂತ, ಅಂಗದಾದಿ ವೀರರುಗಳು ಇದ್ದರು. ಅವರೆಲ್ಲ ದಂಡಕಾರಣ್ಯದಲ್ಲಿ ಹುಡುಕುತ್ತಾ ಬರುತ್ತಿರುವಾಗ ಒಂದು ಬಿಲದ್ವಾರ ಕಾಣಿಸಿತು. ಆಗ ಎಲ್ಲರಿಗೂ ಸಹಿಸಲಾರದಷ್ಟು ಹಸಿವು ನೀರಡಿಕೆ. ಆ ಬಿಲವನ್ನು ಹೊಕ್ಕು ಹುಡುಕಬೇಕೆಂಬ ಆಸೆಯಾಯಿತು. ಆದರೆ ಮನಸ್ಸಿನಲ್ಲಿ ಭಯ. ಒಬ್ಬರನ್ನೊಬ್ಬರು ಭದ್ರವಾಗಿ ಹಿಡಿದು ಕೊಂಡು, ಭಯಂಕರವಾದ ಕತ್ತಲೆಯಿಂದ ಕೂಡಿದ ಬಿಲವನ್ನು ಪ್ರವೇಶ ಮಾಡಿದರು. ನಡುಗುತ್ತ ಬಹುದೂರ ಹೋದಮೇಲೆ, ಬೆಳಕು ಕಾಣಿಸಿತು. ಅಲ್ಲಿಂದ ಮುಂದೆ ಹೋದರೆ, ಜಾಜ್ವಲ್ಯಮಾನವಾಗಿ ಹೊಳೆಯುತ್ತಿರುವ, ತಾಳೆ, ಹೊನ್ನೆ, ಸಂಪಗೆ, ಸುರಹೊನ್ನೆ ಮರಗಳು ಕಾಣಿಸುವುವು. ಒಂದೊಂದು ಮರವೂ, ಚಿನ್ನದ ಚಿಗುರು, ಚಿನ್ನದ ಗೊಂಚಲು, ಚಿನ್ನದ ಲತೆಗಳಿಂದ ಕೂಡಿದ್ದವು. ಅಲ್ಲಿನ ಕಮಲಗಳೂ ಕೂಡ ಸುವರ್ಣಮಯ ವಾಗಿದ್ದವು. ಅಲ್ಲಿನ ಮಹಡಿಮನೆಗಳೆಲ್ಲಾ ಚಿನ್ನಬೆಳ್ಳಿ ಮುತ್ತಿನ ಮಣಿ ಗಳಿಂದ ಅಲಂಕರಿಸಲ್ಪಟ್ಟಿದ್ದುವು. ಅಪೂರ್ವ ಭೋಗ್ಯವಸ್ತುಗಳೆಲ್ಲ ಅಲ್ಲಿದ್ದುವು.

ಇವೆಲ್ಲವನ್ನೂ ಆ ಕಪಿಗಳು ಆಶ್ಚರ್ಯದಿಂದ ನೋಡುತ್ತಿರುವಾಗ, ನಾರುಮಡಿಯನ್ನುಟ್ಟು, ಹೊಳೆಯುತ್ತಿರುವ ಕಣ್ಣುಗಳುಳ್ಳ ಒಬ್ಬ ಹೆಂಗ ಸನ್ನು ಅವರು ಕಂಡರು. ವಾನರರಿಗೆ ಹೆಚ್ಚು ಭಯವುಂಟಾಗಿ ಎಲ್ಲರೂ ಸದ್ದುಮಾಡದೆ ನಿಂತುಬಿಟ್ಟರು. ಹನುಮಂತನು ಧೈರ್ಯಮಾಡಿ ಮುಂದೆ

ಬಂದು, 'ಈ ಪ್ರದೇಶ ಯಾರದು ? ಇಂತಹ ಅಪೂರ್ವ ಪದಾರ್ಥಗಳು ಇಲ್ಲಿಗೆ ಹೇಗೆ ಬಂದುವು ? ನಿರ್ಮಲವಾದ ಈ ನೀರಿನಲ್ಲಿ ಚಿನ್ನದ ಕಮಲಗಳಿರಲು ಕಾರಣವೇನು ? ಇಲ್ಲಿನ ನೀರು ಪ್ರಾಣಿಗಳೂ, ವೃಕ್ಷಗಳೂ, ಎಲ್ಲವಸ್ತು ಗಳೂ, ಸುವರ್ಣಮಯವಾಗಿರುವುದಕ್ಕೆ ಕಾರಣವೇನು' ಎಂದು ಕೇಳಿದನು.

ಆಗ ಆ ಸ್ತ್ರೀಯು, ಹನುಮಂತನನ್ನು ಕುರಿತು, ಎಲೈ ! ವಾನ ರೋತ್ತಮನೆ ! ಮಯನೆಂಬ ದಾನವನೊಬ್ಬನಿದ್ದಾನೆ, ಅವನು ಮಾಯಾವಿ. ಅವನೇ ಹಿಂದೆ ವಿಶ್ವಕರ್ಮನಾಗಿದ್ದನು. ಅವನು ಇಲ್ಲಿ ಈ ತೋಟವನ್ನು ನಿರ್ಮಿಸಿದ, ಇಲ್ಲಿಯೇ ಸಾವಿರ ವರ್ಷ ತಪಸ್ಸುಮಾಡಿದ, ಶಿಲ್ಪಶಾಸ್ತ್ರವನ್ನು ಬ್ರಹ್ಮನ ವರದಿಂದ ಸ್ವಾಧೀನಪಡಿಸಿಕೊಂಡನು. ತನಗೆ ಏನೇನು ಬೇಕೋ ಅವೆಲ್ಲವನ್ನೂ, ಕ್ಷಣಮಾತ್ರದಲ್ಲಿ ಪಡೆಯುವಷ್ಟು ಶಕ್ತಿ ಹೊಂದಿದ್ದನು. ಆದರೆ ದಾನವನಾಗಿ, ಹೇಮೆ ಎಂಬ ಅಪ್ಸರಸೆಯನ್ನು ಮದುವೆಮಾಡಿ ಕೊಂಡದ್ದರಿಂದ ದೇವೇಂದ್ರನಿಗೆ ಕೋಪ ಬಂದಿತು. ಅವನನ್ನು ವಜ್ರಾ ಯುಧದಿಂದ ಹೊಡೆದು ಕೊಂದನು. ಆದರೆ ಈ ತೋಟವನ್ನು ಮಾತ್ರ ಹೇಮೆಗೆ ಕೊಟ್ಟನು. ಅವಳ ಅಪ್ಪಣೆಯಂತೆ ನಾನು ಇದನ್ನು ನೋಡಿ ಕೊಳ್ಳುತ್ತಿದ್ದೇನೆ. ನನ್ನ ಹೆಸರು ಸ್ವಯಂಪ್ರಭೆ, ನೃತ್ಯಗೀತೆಗಳಲ್ಲಿ ನಿಪುಣೆ ಯಾದ ಹೇಮೆಯು ನನ್ನ ಸಖಿ. ನನಗೆ ಯಾರಿಂದಲೂ ತಿರಸ್ಕಾರವಾಗ ದಂತೆ ವರವುಂಟು. ನೀವುಗಳೆಲ್ಲ ಈ ಫಲಮೂಲಗಳನ್ನು ತಿಂದು, ತಿಳಿ ನೀರು ಕುಡಿದು ಆಯಾಸ ಪರಿಹರಿಸಿಕೊಳ್ಳಿ. ಆಮೇಲೆ ನಿಮ್ಮ ವೃತ್ತಾಂತ ವನ್ನು ತಿಳಿಸಿ, ಎಂದು ವಿನಯದಿಂದ ಹೇಳಿದಳು.

ಅನಂತರ ಹನುಮಂತನು ಎಲ್ಲವನ್ನೂ ನಿಷ್ಕಪಟ ರೀತಿಯಲ್ಲಿ ತಿಳಿಸು ವನು. "ಅಯೋಧ್ಯೆಯ ಅರಸುಕುಮಾರ ಶ್ರೀರಾಮನು ಅವನ ತಮ್ಮ ಲಕ್ಷ್ಮಣನೊಡನೆಯೂ, ಪತ್ನಿಯಾದ ಸೀತಾದೇವಿಯೊಡನೆಯೂ, ದಂಡ ಕಾರಣ್ಯಕ್ಕೆ ಬಂದಿದ್ದನು. ಅವರು ಜನಸ್ಥಾನದಲ್ಲಿದ್ದಾಗ, ರಾವಣನೆಂಬ ರಾಕ್ಷಸನು ಕಪಟಸನ್ಯಾಸಿಯ ವೇಷದಲ್ಲಿ ಆಶ್ರಮಕ್ಕೆ ಬಂದು, ರಾಜ ಕುಮಾರರಿಲ್ಲದಿದ್ದಾಗ ಸೀತಾದೇವಿಯನ್ನು ಬಲಾತ್ಕಾರವಾಗಿ ಕದ್ದು ಕೊಂಡು ಹೋಗಿರುವನು. ಅವಳನ್ನು ಹುಡುಕುತ್ತಾ, ಆ ರಾಜ ಕುಮಾರರು ಕಾಡಿನಲ್ಲಿ ಬರುತ್ತಿದ್ದಾಗ, ವಾನರರಾಜ ಸುಗ್ರೀವನಿಗೂ

ಅವರಿಗೂ ಸ್ನೇಹವಾಯಿತು. ಸುಗ್ರೀವನು ವಾನರರನ್ನು ಕರೆದು, ಸೀತಾ ದೇವಿಯನ್ನು ಹುಡುಕಿ ಕಂಡುಹಿಡಿಯಲು ನಾಲ್ಕು ದಿಕ್ಕುಗಳಿಗೂ ಕಳುಹಿಸಿ ಸಿರುವನು. ದಕ್ಷಿಣದ ಕಡೆ ನಾವು ಬರುತ್ತಿದ್ದಾಗ ಈ ಬಿಲವು ಕಂಡಿತು. ಬಾಯಾರಿಕೆಯಿಂದ ಬಳಲಿ ಬೆಂಡಾಗಿದ್ದ ನಾವು ಇಲ್ಲಿ ನೀರು ಸಿಕ್ಕಬಹು ದೆಂಬ ಆಸೆಯಿಂದ ಬಂದೆವು. ಎಲಾ ! ತಾಪಸಿಯೇ ! ಅತಿಥಿ ಧರ್ಮ ವನ್ನು ನೀನು ಚೆನ್ನಾಗಿ ಬಲ್ಲೆ. ಹಸಿವಿನಿಂದ ಸಾಯುತ್ತಿದ್ದ ನಮಗೆ ಆಹಾರಕೊಟ್ಟು ಪ್ರಾಣದಾನಮಾಡಿದೆ. ಎಲಾ ! ಧರ್ಮಚಾರಿಣಿ ! ಈಗ ನಾವು ನಿನ್ನ ಮರೆಹೊಕ್ಕಿದ್ದೇವೆ. ಸೀತಾದೇವಿಯನ್ನು ಕಂಡುಹಿಡಿಯು ವುದಕ್ಕೆ ನಮಗೆ ವಿಧಿಸಿದ್ದ ಅವಧಿ ಮುಗಿದುಹೋಯಿತು. ನಮ್ಮನ್ನು ಈ ಬಿಲದಿಂದ ಹೊರಕ್ಕೆ ಬಿಟ್ಟು ಕಾಪಾಡು" ಎಂದು ಹನುಮಂತನು ಹೇಳಿದನು.

ಆಗ ಸ್ವಯಂಪ್ರಭೆಯು ಯಾರು ಆ ಬಿಲವನ್ನು ಪ್ರವೇಶಮಾಡು ವರೊ ಅಂತಹವರು ಜೀವಸಹಿತ ಹಿಂದಿರುಗಿ ಹೋಗುವಂತಿಲ್ಲ. ಆದರೆ ಆ ವಾನರರು ಒಳ್ಳೆಯವರು, ಸ್ವಾಮಿಭಕ್ತರಾಗಿ ಧರ್ಮದಿಂದ ನಡೆಯ ತಕ್ಕವರಾದ್ದರಿಂದ, ತನ್ನ ಪುಣ್ಯದಿಂದ ಅವರನ್ನೆಲ್ಲಾ ಹೊರಕ್ಕೆ ಬಿಡುವು ದಾಗಿ ಹೇಳಿದಳು. ವಾನರರಿಗೆಲ್ಲ ಕಣ್ಣು ಮುಚ್ಚಿಕೊಳ್ಳುವಂತೆ ತಿಳಿಸಿ, ಅವರು ಹಾಗೆಯೇ ಮಾಡಲು ಎಲ್ಲರನ್ನೂ ಹೊರಕ್ಕೆ ತಂದುಬಿಟ್ಟಳು. ಆಗ ವಾನರರೆಲ್ಲ ಮುಂದೇನು ಮಾಡಬೇಕೆಂಬುದನ್ನು ಯೋಚಿಸುತ್ತ ನಿರಾಶರಾಗಿ ಕುಳಿತಿದ್ದರು. ವಾನರರಾಡುತ್ತಿದ್ದ ಮಾತುಗಳನ್ನು ಹತ್ತಿರದ ಬಂಡೆಯ ಪೊಟರೆಯಲ್ಲಿ ಕುಳಿತಿದ್ದ ಸಂಪಾತಿ ಎಂಬ ಗೃಧ್ರರಾಜನು ಕೇಳಿದನು. ಹನುಮಂತನಿಂದ ತನ್ನ ತಮ್ಮ ಜಟಾಯುವಿನ ಮರಣ ವೃತ್ತಾಂತವನ್ನು ತಿಳಿದು ವ್ಯಸನಪಟ್ಟನು. ಸಂಪಾತಿಗೆ ಗರುಡನಂತೆ ದಿವ್ಯದೃಷ್ಟಿಯೂ, ದೈವದತ್ತವಾದ ಅದ್ಭುತ ಶಕ್ತಿಯೂ ಇದ್ದಿತು. ಈ ಶಕ್ತಿಯಿಂದ ಸೀತಾ ದೇವಿ ಇರುವ ಸ್ಥಳವನ್ನು ಹನುಮಂತನಿಗೆ ತಿಳಿಸಿದನು. ಲಂಕಾಪಟ್ಟಣದ ರಾಜನಾದ ರಾವಣನ ಉದ್ಯಾನ ಅಶೋಕವನದಲ್ಲಿ ಸೀತೆಯು ಬಂಧಿತ ಳಾಗಿರುವಳೆಂದು ಹೇಳಿದನು. ವಾನರರೆಲ್ಲ ಅತ್ಯಂತ ಹರ್ಷಿತರಾಗಿ ಸಮುದ್ರತೀರಕ್ಕೆ ಬಂದರು.

ಲಂಕಾಪಟ್ಟಣವನ್ನು ಮುಟ್ಟಬೇಕಾದರೆ, ನೂರು ಯೋಜನ ದೂರದ ಸಮುದ್ರವನ್ನು ಹಾರಬೇಕು. ಯಾರುತಾನೆ ಅಷ್ಟು ದೂರ ಹಾರ ಬಲ್ಲರು ? ವಾನರರು ತಮ್ಮ ಬಲಾಬಲಗಳನ್ನು ಕುರಿತು ಮಾತನಾಡಿ ಕೊಂಡರು. ಅವರೆಲ್ಲ ಒಟ್ಟಿಗೆ ಸೇರಿ ಹನುಮಂತನು ಈ ಕಾರ್ಯಕ್ಕೆ ಯೋಗ್ಯನೆಂದು ಅವನನ್ನು ಹೊಗಳಲು ಪ್ರಾರಂಭಿಸಿದರು. ಅವರಲ್ಲಿ ಹಿರಿಯನಾದ ಜಾಂಬುವಂತನು “ ಎಲೈ ಅಂಜನಾಸುತನೇ ! ನೀನು ಸಮಸ್ತ ಕಪಿಗಳಲ್ಲಿ ಸರ್ವೋತ್ತಮನು. ಸಮಸ್ತ ಶಾಸ್ತ್ರಗಳನ್ನೂ ತಿಳಿದವನು. ಬಲದಲ್ಲಿ ಸುಗ್ರೀವನಿಗೂ, ರಾಮಲಕ್ಷ್ಮಣರಿಗೂ ಸಮ. ಗರುತ್ಮಂತನ ರೆಕ್ಕೆಗಳಿಗಿರುವಷ್ಟು ಬಲವು ನಿನ್ನ ಬಾಹುಗಳಿಗಿವೆ. ನಿನಗಿರುವಷ್ಟು ಬುದ್ಧಿಯೂ, ಧೈರ್ಯವೂ, ಜಗತ್ತಿನಲ್ಲಿ ಇನ್ನಾರಿಗೂ ಇಲ್ಲ. ಸಮಸ್ತ ಶಕ್ತಿಗಳಿಂದ ಸಂಪೂರ್ಣನಾದವನು ಈಗ ನೀನೊಬ್ಬನೇ ! ಹಾರುವುದರಲ್ಲಿ ನಿನಗೆ ಸಮಾನನಾರೂ ಇಲ್ಲ. ಈ ವಾನರರೆಲ್ಲ, ನಿನ್ನ ವೀರ್ಯವನ್ನೂ, ಸಾಮರ್ಥ್ಯ ಶಕ್ತಿಯನ್ನೂ ನೋಡಬೇಕೆಂದು ತವಕದಿಂದ ಆತುರಗೊಂಡಿ ದ್ದಾರೆ. ಎಲೈ ! ವಾನರಸಿಂಹನೇ ! ಏಳು ನಿನ್ನ ಪರಾಕ್ರಮವನ್ನು ತೋರಿಸು. ಸಮುದ್ರವನ್ನು ದಾಟು ” ಎಂದು ಹೊಗಳಿದನು.

ಹೀಗೆ ಪ್ರತಿಯೊಬ್ಬ ವಾನರ ವೀರನೂ, ಹನುಮಂತನನ್ನು ಸ್ತೋತ್ರ ಮಾಡುತ್ತಿರುವಾಗ ಅವನ ದೇಹವೂ, ಶಕ್ತಿಯೂ, ಮೇಲೆ ಮೇಲೆ ಉಬ್ಬಿ ಬರುತ್ತಿತ್ತು. ಅವನ ದಿವ್ಯ ತೇಜಸ್ಸು ಹೆಚ್ಚುತ್ತಿತ್ತು. ಅವನ ಆಕಾರವು ಬೆಳೆಯುತ್ತಿತ್ತು. ಸಂತೋಷದಿಂದ ಉಬ್ಬಿದವನಾಗಿ ಆ ವಾನರ ವೀರರಿಗೆ ಹೀಗೆ ಹೇಳುವನು, “ ಎಲೈ ಪೂಜ್ಯರೇ ! ಅಗ್ನಿಗೆ ಸಮನಾದ ವಾಯು ದೇವನು ಅಪಾರ ಶಕ್ತಿಯುಳ್ಳವನು. ನೆಲವನ್ನು ಮುಟ್ಟದೆ ಆಕಾಶದಲ್ಲಿಯೇ ಸಂಚರಿಸತಕ್ಕವನು. ಅಂತಹ ಶೀಘ್ರಗತಿಯ ವಾಯುದೇವನ ಮಗನು ನಾನು. ಈಗ ಸಮುದ್ರವನ್ನು ಹಾರುವೆನು. ಸಮುದ್ರದಲ್ಲಿರುವ ಸಮಸ್ತ ಪ್ರಾಣಿಗಳೂ ಹೆದರಿಕೆಯಿಂದ ತತ್ತರಿಸುವಂತೆ ಅಲ್ಲೋಲ ಕಲ್ಲೋಲ ಮಾಡುವೆನು. ನನ್ನ ವೇಗದಿಂದ ಸಮುದ್ರವು ಶೋಷಿಸಿ ಹೋಗುವುದೋ ಅಥವಾ ಭೂಮಿಯು ಭೇದಿಸುವುದೋ ನೋಡುತ್ತಿರಿ ? ಪರ್ವತಗಳೇನಾ ದರೂ ಚೂರಾಗುವುದೋ ನೋಡಿ. ಎಲೈ ! ವೀರರೇ ಆಕಾಶದಲ್ಲಿ ನಾನು

ಹಾರುವುದನ್ನು ನೀವು ನೋಡುವಿರಿ. ತ್ರಿವಿಕ್ರಮಾವತಾರ ಮಾಡಿದ ಮಹಾ ವಿಷ್ಣುವಿನ ರೂಪದಂತೆ ನನ್ನ ರೂಪಾಗುವುದು. ವಜ್ರಹಸ್ತನಾದ ಇಂದ್ರನನ್ನಾಗಲಿ ಬ್ರಹ್ಮನನ್ನಾಗಲಿ ಎದುರಿಸುವಂತಹ ಶಕ್ತಿಯು ನನಗೆ ಈಗ ಬರುವುದು. ಆ ಲಂಕಾನಗರಿಯನ್ನೇ ಕಿತ್ತು ತಂದು ನಿಮ್ಮ ಮುಂದೆ ಇಡಬೇಕೆಂಬ ಮನಸ್ಸು ನನಗೆ ಹುಟ್ಟಿರುವುದು."

ಹೀಗೆ ಹೇಳಿ ಕೂಡಲೇ ಹನುಮಂತನು ಸಮುದ್ರದ ಮೇಲಕ್ಕೆ ಹಾರಿದನು. ಹಾರಿಹೋಗುತ್ತಿರುವಾಗ ನಾಗಮಾತೆಯಾದ ಸುರಸೆಯನ್ನು ಜಯಿಸಿದನು. ಸಿಂಹಿಕೆಯೆಂಬ ರಾಕ್ಷಸಿಯನ್ನು ಕೊಂದನು. ವಾಯು ವೇಗದಿಂದ ಹೋಗುತ್ತಾ ತ್ರಿಕೂಟ ಶಿಖರದಲ್ಲಿರುವ ಲಂಕಾಪಟ್ಟಣವನ್ನು ಕಂಡನು. ಅದರ ಸುತ್ತ ಇದ್ದ ಸರಳ ವೃಕ್ಷಗಳನ್ನೂ, ಖರ್ಜೂರಾದಿ ಗಿಡಗಳನ್ನೂ, ಹೂವುಗಳಿಂದ ಕೂಡಿದ ತರುಲತೆಗಳನ್ನೂ ನೋಡಿದನು. ತಾವರೆ, ನೈದಿಲೆ ಮುಂತಾದ ನೀರು ಹೂವುಗಳಿಂದ ತುಂಬಿದ ಸರೋವರಗಳೂ, ಜಲಾಶ್ರಯಗಳೂ, ಕ್ರೀಡಾಸ್ಥಾನಗಳೂ, ಮನೋಹರ ಉದ್ಯಾನಗಳೂ ಅವನಿಗೆ ಕಾಣಿಸಿದುವು. ಆ ಸುಂದರ ಪಟ್ಟಣದ ಸುತ್ತ ಚಿನ್ನದ ಕೋಟೆ, ರಾಜಬೀದಿಗಳು, ಎರಡು ಪಕ್ಕದಲ್ಲಿ ಎತ್ತರವಾದ ಮಹಡಿಮನೆಗಳು, ಈ ಮನೆಗಳಿಗೆ ಚಿನ್ನದ ಬಾಗಿಲು ನವರತ್ನಗಳಿಂದ ಕೂಡಿದ ಚಿತ್ರರೇಖೆಗಳು—ಇವೆಲ್ಲವನ್ನೂ ಹನುಮಂತನು ನೋಡಿದನು. ಹೀಗೆ ವಿಶ್ವಕರ್ಮನಿರ್ಮಿತವಾದ ಲೋಕಮೋಹಕವಾದ, ಲಂಕಾಪಟ್ಟಣವನ್ನು ನೋಡಿ, ಸೀತಾದೇವಿಯನ್ನು ಹುಡುಕುವ ಉಪಾಯ ಯೋಚಿಸುತ್ತಾ ಲಂಕೆಯ ಉತ್ತರ ದಿಕ್ಕಿನ ಹೆಬ್ಬಾಗಿಲ ಹತ್ತಿರ ಬಂದನು. ಸಾಮಾನ್ಯ ಕಪಿಯ ರೂಪವನ್ನು ಧರಿಸಿ ಸೂರ್ಯಾಸ್ತಮಯ ಸಮಯವನ್ನು ನಿರೀಕ್ಷಿಸುತ್ತಾ, ಪುರಪ್ರವೇಶಕ್ಕೆ ಸಿದ್ಧನಾಗುತ್ತಿದ್ದನು. ಬೆಳದಿಂಗಳು ಹಾಲು ಚೆಲ್ಲಿದಂತೆ, ಶಂಖ ಹರಡಿದಂತೆ, ಅಚ್ಚ ಬಿಳುಪು ಹಂಸಗಳು ಕೊಳದಲ್ಲಿ ಈಜಾಡುವಂತೆ ಕಾಣಲು ಪ್ರಾರಂಭವಾಯಿತು.

ಲಂಕಾಪಟ್ಟಣದ ಸೊಬಗನ್ನು ಹನುಮಂತನು ನೋಡುತ್ತಾ ಆಶ್ಚರ್ಯ ಪಡುತ್ತಿದ್ದನು. ಇದೇನು ಕುಬೇರ ನಗರಿಯಾದ ಅಲಕಾವತಿಯೋ? ಪಾತಾಳಲೋಕದ ಭೋಗವತಿಯೋ? ಅಥವಾ ಇಂದ್ರನ ಅಮರಾವತಿ

ಪಟ್ಟಣವೋ ಎನ್ನುವಂತಿತ್ತು. ಚಿನ್ನದ ಬಾಗಿಲುಗಳೇನು ? ವೈಢೂರ್ಯದ ಜಗುಲಿಗಳೇನು ? ವಜ್ರ, ನೀಲ, ಸ್ಫಟಿಕ—ಮುಂತಾದ ನವರತ್ನಗಳಿಂದ ಕೆತ್ತಿದ ನೆಲಗಟ್ಟುಗಳೇನು ? ಚೊಕ್ಕ ಬೆಳ್ಳಿಯ ಚಿತ್ರಕೆಲಸಗಳೇನು ? ಉತ್ತಮ ಸೋಪಾನಗಳೇನು ? ಹೀಗೆ ಸರ್ವೋತ್ತಮವಾಗಿ, ಸರ್ವ ಶೋಭಾಯಮಾನವಾಗಿ, ಸರ್ವಸೌಭಾಗ್ಯಯುಕ್ತವಾಗಿ ಕಾಣುತ್ತಿರುವ ಲಂಕಾಪಟ್ಟಣವನ್ನು ಪ್ರವೇಶಿಸಬೇಕೆಂದು ಹನುಮಂತನು ಆತುರದಿಂದ ಹೆಬ್ಬಾಗಿಲ ಬಳಿಗೆ .ಬಂದನು. ಆ ವೇಳೆಗೆ ಸರಿಯಾಗಿ ರಾವಣ ಶಿಕ್ಷಿತಳಾದ ಲಂಕಿಣಿಯು ಅವನ ಮುಂದೆ ಬಂದು ನಿಂತು ಆರ್ಭಟಿಸಿ ಅವನನ್ನು ತಡೆದಳು. ಬುದ್ಧಿ ಮತ್ತು ಪರಾಕ್ರಮದಲ್ಲಿ ಮೇಲೆನಿಸಿದ ಹನುಮಂತನು ಸ್ವಲ್ಪವೂ ಭಯಪಡದೆ ಅವಳ ಮುಂದೆ ಬೆಟ್ಟದಂತೆ ನಿಂತನು.

ವಿಕಾರ ರೂಪಿಯಾದ ರಾಕ್ಷಸಿಯನ್ನು ಕಂಡು, ಹನುಮಂತನು ಮೃದುವಾಕ್ಯಗಳಿಂದ ತಾನು ಸುಂದರ ಲಂಕಾಪಟ್ಟಣವನ್ನೂ, ಅದರ ಉಪ್ಪರಿಗೆ, ಕೋಟೆ, ಸರೋವರ, ಪುರದ್ವಾರ—ಎಲ್ಲವನ್ನೂ ನೋಡಿ ಹಿಂತಿರುಗಿ ಬರುವೆನೆಂದು ಹೇಳಿದನು. ಇದನ್ನು ಕೇಳಿ ರಾಕ್ಷಸಿಯು ಕೋಪಗೊಂಡು ಅವನನ್ನು ಹೆದರಿಸಿ ಕಳುಹಿಸುವ ಸಲುವಾಗಿ ಮುಂದೆ ಬಂದು ಕೂಗುತ್ತಾ, ಬಲವಾಗಿ ಅವನನ್ನು ಹೊಡೆದಳು. ಹನುಮಂತ ನಿಗೆ ಕೋಪ ಬಂದರೂ, ಅದನ್ನು ತೋರಿಸದೆ ತನ್ನ ಮುಷ್ಟಿಯಿಂದ ಅವಳ ತಲೆಯ ಮೇಲೆ ಒಂದೇಟು ಕೊಟ್ಟನು. ಅದನ್ನು ತಡೆಯಲಾರದೆ ಅವಳು ನೆಲದ ಮೇಲೆ ಬಿದ್ದಳು. ಸ್ವಲ್ಪ ಹೊತ್ತಿನಲ್ಲಿ ಚೇತರಿಸಿಕೊಂಡು ಮೆಲ್ಲಗೆ ಮೇಲಕ್ಕೆದ್ದಳು. ಹಿಂದೆ ಬ್ರಹ್ಮನು ತನಗೆ ಹೇಳಿದ್ದ ಮಾತುಗಳು ಅವಳ ನೆನಪಿಗೆ ಬಂದುವು. ಲಂಕಾಪಟ್ಟಣದ ಸಮಸ್ತ ರಾಕ್ಷಸರ ಕೊನೆಗಾಲ ಸಮೀಪಿಸಿತೆಂದು ತಿಳಿದಳು. ನಗರವನ್ನು ನೋಡಿ ಬರುವಂತೆ ಹನುಮಂತ ನಿಗೆ ಹೇಳಿ ಕಳುಹಿಸಿಕೊಟ್ಟಳು.

ಕೂಡಲೇ ಹನುಮಂತನು ಹೆಬ್ಬಾಗಿಲಿಂದ ಪ್ರವೇಶಮಾಡದೆ, ಗೋಡೆ ಯನ್ನು ಹಾರಿ ಒಳಗಿಳಿದು ಸುಗ್ರೀವನಿಗೆ ಶ್ರೇಯಸ್ಸನ್ನೂ, ರಾವಣನಿಗೆ ಕೇಡನ್ನೂ, ಬಯಸುತ್ತಾ ಶತ್ರುವನ್ನು ಮೆಟ್ಟುವಂತೆ, ತನ್ನ ಎಡಗಾಲನ್ನು ಲಂಕೆಯ ನೆಲದಲ್ಲಿ ಊರಿದನು. ಪುರವನ್ನು ಹೀಗೆ ಹೊಕ್ಕು ಅರಮನೆಯ

ಒಂದೊಂದು ಪ್ರಾಕಾರವನ್ನೂ ಹುಡುಕಿದನು. ಆಮೇಲೆ, ಉದ್ಯಾನ ಉಪ್ಪರಿಗೆ, ಸರೋವರ, ಎಲ್ಲೆಲ್ಲಿಯೂ ನೋಡಿದನು. ಎಲ್ಲಿಯೂ ಸೀತೆಯನ್ನು ಕಾಣದೆ ಹತಾಶನಾಗಿ ಯೋಚಿಸುತ್ತಿದ್ದನು. ಸೀತಾದೇವಿಯು ತನ್ನ ದಾರಿಗೆ ಬರಲಿಲ್ಲವೆಂದು ರಾವಣನು ಭಕ್ಷಿಸಿರಬಹುದೇ ? ಆಕಾಶದಲ್ಲಿ ಹಾರಿಹೋಗು ತ್ತಿರುವಾಗ, ಅವಳು ಕೆಳಗೆ ಬಿದ್ದು ಪ್ರಾಣಬಿಟ್ಟಿರಬಹುದೇ ? ಒಂದು ಪಕ್ಷ ಹೀಗೇನಾದರೂ ಆಗಿದ್ದರೆ ಮುಂದೇನು ಗತಿ ? ಹೇಗಾದರೂ ರಾವಣನ ಮೇಲೆ ತಾನು ಹಗೆತನವನ್ನು ತೀರಿಸಬೇಡವೇ ? ಅವನನ್ನು ತಾನು ಕೊಲ್ಲ ಲಾಗದೆ ? ಅವನನ್ನು ಹಿಡಿದು ರಾಮನಿಗೆ ಒಪ್ಪಿಸಲಾರೆನೆ ? ಸೀತೆಯನ್ನು ಕಂಡುಹಿಡಿಯದೆ ರಾಮನಿಗೆ ತಾನು ಮುಖ ತೋರಿಸುವುದೆಂತು ? ಸುಗ್ರೀವನ ಕೋಪಕ್ಕೆ ತುತ್ತಾಗುವುದು ಹೇಗೆ ? ಹೀಗೆಲ್ಲಾ ಯೋಚಿಸುತ್ತಾ, ಅಶೋಕವನವನ್ನು ಮೆಲ್ಲನೆ ಪ್ರವೇಶಮಾಡಿದನು.

ಹೀಗೆ ಅಶೋಕವನವನ್ನು ಪ್ರವೇಶಮಾಡುವಾಗ, ರಾಮಲಕ್ಷ್ಮಣ ರಿಗೂ, ಸೀತಾದೇವಿಗೂ, ವಾಯುದೇವನಿಗೂ, ಸೂರ್ಯಚಂದ್ರರಿಗೂ, ಮರುದ್ಗಣಗಳಿಗೂ, ನಮಸ್ಕಾರ ಮಾಡಿ, ಶ್ರೀ ಮಹಾ ವಿಷ್ಣುವು ತನಗೆ ಕಾರ್ಯಸಿದ್ಧಿ ಕೊಡಲೆಂದು ಪ್ರಾರ್ಥಿಸುತ್ತಾ ಮುಂದೆ ಹೋದನು. ಅಲ್ಲಿ ಅಸುಗೆ, ಸಂಪಿಗೆ, ಉದ್ದಾಲಿಕ, ಮಾವು, ಹಲಸು, ಮುಂತಾದ ಮರಗಳು ಹೂವುಗಳಿಂದ ತುಂಬಿರುವುದನ್ನು ಕಂಡನು. ಚಿತ್ರ ವಿಚಿತ್ರ ಗಿಡಗಳೂ, ಲತೆಗಳೂ, ಬೆಳಗಿನ ಸೂರ್ಯನಂತೆ ಪ್ರಕಾಶಿಸುತ್ತಿದ್ದವು. ಅನೇಕ ಮೃಗ ಪಕ್ಷಿಗಳು ಉಲ್ಲಾಸದಿಂದ ಮರದಿಂದ ಮರಕ್ಕೆ ಹಾರುತ್ತಿದ್ದವು. ನವಿಲು ಗಳು ಕೇಕೆ ಹಾಕುತ್ತಿದ್ದವು. ಅಲ್ಲಿಯೇ ಹತ್ತಿರವಿದ್ದ ಎಳೆಯ ಚಿಗುರು, ಅಂದವಾದ ಎಲೆ, ಸುವಾಸನೆಯ ಹೂವುಗಳಿಂದ ಕೂಡಿದ ಶಿಂಶುಪಾ ವೃಕ್ಷವೊಂದನ್ನು ಹತ್ತಿ, ಒಂದು ಕೊಂಬೆಯ ಮೇಲೆ ಕುಳಿತು, ಸುತ್ತಲೂ ನೋಡಿದನು. ಸೀತೆಯನ್ನು ಕಂಡು ಹಿಡಿಯುವುದಕ್ಕೆ ಅದೇ ತಕ್ಕ ಸ್ಥಳವೆಂದು ಅವನಿಗೆ ತೋರಿತು. ಅಲ್ಲಿಯೇ ಕುಳಿತು ಸುತ್ತಲೂ ದೃಷ್ಟಿಸಿ ನೋಡಿದನು.

ಸ್ವಲ್ಪ ದೂರದಲ್ಲಿ ಚೈತ್ಯಾಲಯದಂತೆ ಎತ್ತರವಾದ ಒಂದು ಪ್ರಾಸಾದ ವನ್ನು ಕಂಡನು. ಅದರ ಮುಂದೆ ಹವಳದ ಸೋಪಾನಗಳು, ಚಿನ್ನದ ಜಗುಲಿ ಇದ್ದುವು. ಜುಗುಲಿಯ ಮೇಲೆ ಸರ್ವಾಂಗ ಸುಂದರಿಯಾದ

ಸ್ತ್ರೀಯೊಬ್ಬಳಿದ್ದಳು. ಮಲಿನವಾಗಿದ್ದಳು. ಸುತ್ತಲೂ ವಿಕಾರ ರೂಪಿ ರಾಕ್ಷಸಸ್ತ್ರೀಯರಿದ್ದರು. ಮಧ್ಯದಲ್ಲಿದ್ದ ಸ್ತ್ರೀಯು ದುಃಖದಿಂದ ಬೆಂದು ಬೆಂಡಾಗಿ, ಪದೇ ಪದೇ ನಿಟ್ಟುಸುರು ಬಿಡುತ್ತಿದ್ದಳು. ಕಣ್ಣೀರು ಸುರಿಸುತ್ತಾ ದುಃಖಾಕ್ರಾಂತಳಾಗುತ್ತಿದ್ದಳು. ಅವಳ ಸ್ಥಿತಿಯು ಕಷ್ಟತಮವಾಗಿತ್ತು; ಕ್ಷೀಣಿಸಿದ ಸಂಪತ್ತಿನಂತೆ, ನಂಬಿಕೆಯಿಲ್ಲದ ಶ್ರದ್ಧೆಯಂತೆ, ಕದಲಿದ ಬುದ್ಧಿಯಂತೆ, ಕಂದಿದ ಕೀರ್ತಿಯಂತೆ, ಭಗ್ನವಾದ ಆಶೆಯಂತೆ, ವಿಘ್ನಹೊಂದಿದ ಕಾರ್ಯಸಿದ್ಧಿಯಂತೆ ಕಾಣುತ್ತಿತ್ತು. ಅವಳ ಕೋಮಲ ದೇಹವೆಲ್ಲ ಕೊಳೆಯಿಂದ ಕೂಡಿತ್ತು. ಪತಿಯ ವಿರಹದಿಂದ ರೂಪ ಕೆಟ್ಟ ಸೀತಾದೇವಿಯನ್ನು ಹನುಮಂತನು ನೋಡಿದನು. ಆದರೂ ಅವಳೇಯೋ ಅಲ್ಲವೋ ಎಂಬ ಅನುಮಾನ ಅವನಿಗುಂಟಾಯಿತು. ಶ್ರೀರಾಮನು ಹೇಳಿದ ಗುರುತುಗಳನ್ನು ಜ್ಞಾಪಿಸಿಕೊಂಡನು. ಋಷ್ಯಮೂಕ ಪರ್ವತದ ಮೇಲೆ ಎಸೆದ ಪಟ್ಟೆಮಡಿಯ ಬಣ್ಣವನ್ನು ಅವಳು ಉಟ್ಟ ಸೀರೆಯೊಡನೆ ಹೋಲಿಸಿದನು. ಕೊನೆಗೆ ಅವಳೇ ಸೀತಾದೇವಿ ಎಂದು ನಿಶ್ಚಯಮಾಡಿದನು.

ಜಗತ್ತಿನಲ್ಲಿ ಹನುಮಂತ, ಭೀಷ್ಮ—ಇವರಿಬ್ಬರು ವಿನಹ ಉಳಿದ ಸಮಸ್ತರೂ ಕಾಮವಶರು. ಹನುಮಂತ ವೀರ ಬ್ರಹ್ಮಚಾರಿ, ಸ್ತ್ರೀಮೋಹವೇನೆಂಬುದನ್ನು ಕನಸಿನಲ್ಲಿಯೂ ಕಾಣದ ಮಹಾ ವಿರಕ್ತ ಇವನು. ಸೀತಾಪಹರಣಕ್ಕಾಗಿ ಶೋಕಗೊಂಡ ಶ್ರೀರಾಮನನ್ನು ಹನುಮಂತ ನೋಡಿದಾಗ ಅವನಿಗೆ ಹೀಗೆನ್ನಿಸಿತ್ತು. ವಸಿಷ್ಠಋಷಿಯ ಶಿಷ್ಯನಾದ ಶ್ರೀರಾಮನು ಹೀಗೆ ಒಬ್ಬ ಹೆಂಗಸಿಗಾಗಿ ಇಷ್ಟು ಕೊರಗಬೇಕೆ ? ಎಂದು ಹೀಗಳೆದು ನಗುಮಾತಾಡಿಕೊಂಡಿದ್ದನು. ವಿರಹ ವೇದನೆ ಏನೆಂಬುದನ್ನು ಕಲಾಮಾತ್ರದಷ್ಟು ಕೂಡ ಕಂಡರಿಯದ ಹನುಮಂತನು ಸೀತೆಯನ್ನು ಅಶೋಕ ವನದಲ್ಲಿ ಕಂಡ ತಕ್ಷಣವೇ ಶ್ರೀರಾಮ ಇವಳನ್ನಗಲಿ ಹೇಗೆ ತಾನೆ ಜೀವದಿಂದಿರುವನೋ ಎಂದು ಆಶ್ಚರ್ಯಪಟ್ಟನು. ಹೀಗೆ ಅನ್ಯೋನ್ಯ ದಂಪತಿಗಳಲ್ಲಿ, ಸೀತಾರಾಮರು ಮಾತ್ರ ಒಂದು ಅಶೋತ್ತರದಿಂದ ಅಗಲಿರಬಲ್ಲರೇ ವಿನಹ, ಇನ್ಯಾರಿಂದಲೂ ಸಾಧ್ಯವಿರಲಿಲ್ಲ. ರಾಮನು ಬಹಳ ದುಷ್ಕರ ಕಾರ್ಯ ಮಾಡಿರುವನು. ಸೀತೆಯಂತಹ ರತ್ನವನ್ನಗಲಿರುವುದು ರಾಮನೊಬ್ಬನಿಗೆ ವಿನಹ ಇನ್ಯಾರಿಂದಲೂ ಸಾಧ್ಯವಿಲ್ಲ. ಸೀತೆಯ ಕೈಹಿಡಿದ

ರಾಮನ ಭಾಗ್ಯವೇ ಭಾಗ್ಯ. ಹೀಗೆಲ್ಲ ಯೋಚಿಸುತ್ತ, ಸೀತಾರಾಮರನ್ನು ಮನಸ್ಸಿನಲ್ಲಿಯೇ ಕೊಂಡಾಡುತ್ತ, ಸೀತೆಯ ದುರವಸ್ಥೆಯನ್ನು ನೋಡಿ ಮರುಗಿದನು.

ಸೀತೆಯೂ ಪರಮಪೂಜ್ಯಳಲ್ಲವೇ ? ಅವಳಿಗೇ ಇಂತಹ ಕೆಟ್ಟ ದೆಸೆ ಬಂದ ಮೇಲೆ ಕಾಲಗತಿಯನ್ನು ಬಲ್ಲವರಾರು ? ರಾಮನು ಏನು ಮಾಡುವನೆಂಬುದನ್ನು ಸೀತೆಯರಿಯಳೇ ? ಲಕ್ಷ್ಮಣನ ಪ್ರಯತ್ನವನ್ನು ಅರಿಯುವ ಶಕ್ತಿ ಅವಳಿಗಿಲ್ಲವೇ ? ಆದುದರಿಂದಲೇ ಇಂತಹ ಕಷ್ಟದೆಸೆಯಲ್ಲಿ ಕೂಡ ಅವಳ ಮನಸ್ಸು ಕದಲದೆ ತಾಳ್ಮೆಯಿಂದಿರುವಳೋ ಏನೋ ? ಸ್ವಭಾವದಲ್ಲಿ ವಯಸ್ಸಿನಲ್ಲಿ, ನಡತೆಯಲ್ಲಿ, ಕುಲೋನ್ನತಿಯಲ್ಲಿ, ಶುಭಲಕ್ಷಣದಲ್ಲಿ, ಸೌಂದರ್ಯದಲ್ಲಿ, ಸೌಶೀಲ್ಯಾದಿ ಗುಣಗಳಲ್ಲಿ, ಸೀತಾದೇವಿಯು ಶ್ರೀರಾಮನಿಗೆ ತಕ್ಕ ಹೆಂಡತಿ. ರಾಮನು ಸೀತೆಗೆ ತಕ್ಕ ಪತಿ. ಬಂಗಾರದ ಮೈಬಣ್ಣವುಳ್ಳ ಲೋಕನಾಯಿಕೆಯಾದ ಲಕ್ಷ್ಮಿಯನ್ನು ಹೋಲುತ್ತಿರುವ ಸೀತಾದೇವಿಯನ್ನು ನೋಡಿ ಹಿಗ್ಗಿ, ರಾಮಕಾರ್ಯ ಸಫಲವಾಯಿತೆಂದು ಹನುಮಂತನು ಸಂತೋಷಪಟ್ಟನು.

ಶಿಂಶುಪಾವೃಕ್ಷದ ಮೇಲೆ ಕುಳಿತಹಾಗೆಯೇ, ಸೀತಾದೇವಿಗೆ ಕೇಳುವಂತೆ ಹನುಮಂತನು ಶ್ರೀರಾಮನ ಸದ್ಗುಣಗಳನ್ನು ವರ್ಣಿಸುತ್ತಿದ್ದನು. ಸೀತೆಯು ತಲೆಯೆತ್ತಿ ನೋಡಿದಳು. ಒಂದು ದೊಡ್ಡ ಕಪಿಯನ್ನು ಕಂಡಳು. ಅದಕ್ಕೆ ನಡುವಿನಲ್ಲಿ ಬಿಳಿಯ ಪಟ್ಟಿಮಡಿ ಮಿಂಚಿನಂತೆ ಹೊಳೆಯುವ ಮೈ, ಸುರಿಗೆ ಹೂವಿನಂತೆ ಥಳಥಳಿಸುತ್ತಿರುವ ದೇಹಕಾಂತಿ, ಚಿನ್ನದಂತೆ ಹೊಳೆಯುವ ಕಣ್ಣುಗಳು. ವಿನಯವಾಗಿ ಒಳ್ಳೆಯ ಮಾತುಗಳನ್ನಾಡುತ್ತಿದ್ದ ಕಪಿಯನ್ನು ನೋಡಿ, ಸೀತಾದೇವಿಗೆ ಆಶ್ಚರ್ಯವಾಯಿತು. ಕಪಿಯ ರೂಪದಲ್ಲಿ ರಾಕ್ಷಸನೇನಾದರೂ ಬಂದಿರಬಹುದೋ ಎಂಬ ಭಯದಿಂದ ಹಾಗೆಯೇ ಮೂರ್ಛೆಹೊಂದಿದಳು. ಸ್ವಲ್ಪ ಹೊತ್ತಿನಲ್ಲಿ ಎಚ್ಚರವಾದಾಗ ಎಲ್ಲವೂ ಸ್ವಪ್ನದಂತೆ ಕಂಡಿತು. ಕಪಿಯು ಹೇಳಿದುದೆಲ್ಲ ನಿಜವಾಗಲೆಂದು ಹಾರೈಸಿದಳು. ದೇವೇಂದ್ರನಿಗೂ, ಬ್ರಹ್ಮದೇವನಿಗೂ, ಅಗ್ನಿಗೂ ಹಾಗೆಯೇ ನಮಸ್ಕಾರಮಾಡಿದಳು. ಸ್ವಲ್ಪ ಹೊತ್ತಿನಲ್ಲಿ ಸುತ್ತಮುತ್ತಲಿದ್ದ ರಾಕ್ಷಸಸ್ತ್ರೀಯರು ಸ್ವಲ್ಪ ದೂರ ಸರಿದು ಮಲಗಿದರು. ಆಗ ಆಂಜನೇಯನು

ಮರದಿಂದ ಕೆಳಗಿಳಿದು ಸೀತಾದೇವಿಯ ಮುಂದೆ ಕೈಮುಗಿದು ನಿಂತು, ಶ್ರೀರಾಮನನ್ನು ಹೊಗಳುವುದರ ಮೂಲಕ ಎಲ್ಲ ವೃತ್ತಾಂತವನ್ನೂ ಸೀತಾ ದೇವಿಯಿಂದ ತಿಳಿದುಕೊಂಡನು. ಅನಂತರ ಸೀತಾದೇವಿಗೆ ಈ ರೀತಿ ಹೇಳುವನು. "ಅಮ್ಮಾ! ನಾನು ಶ್ರೀರಾಮದೂತನು. ನಿನ್ನ ಪತಿ ಶ್ರೀರಾಮನು ಕ್ಷೇಮದಿಂದಿರುವನು. ತನ್ನ ಕ್ಷೇಮವನ್ನು ನಿನಗೆ ತಿಳಿಸು ವಂತೆ ಅಪ್ಪಣೆ ಮಾಡಿರುವನು. ಆ ನಿನ್ನ ಪರಮ ಪೂಜ್ಯ ಪತಿಗೆ ಪ್ರೀತಿಯ ತಮ್ಮನಾದ ಲಕ್ಷ್ಮಣನೂ ಕೂಡ, ತನ್ನ ನಮಸ್ಕಾರವನ್ನು ನಿನಗೆ ತಿಳಿಸ ಬೇಕೆಂದು ಹೇಳಿರುವನು." ಹೀಗೆಂದು ಹನುಮಂತನು ಸ್ವಲ್ಪ ಮುಂದೆ ಬರಲು, ಸೀತಾದೇವಿಯು ರಾವಣನೇನಾದರೂ ಕಪಿ ರೂಪದಲ್ಲಿ ಬಂದಿರು ವನೋ ಎಂಬ ಅನುಮಾನದಿಂದ ಭಯಪಟ್ಟು ಹಾಗೆಯೇ ನೆಲದ ಮೇಲೆ ಕುಳಿತುಬಿಟ್ಟಳು. ಹನುಮಂತನು ಬಹು ವಿನಯವಾಗಿ, ನಯವಾದ ಮಾತುಗಳಿಂದ, ತಾನು ಶ್ರೀರಾಮಲಕ್ಷ್ಮಣರನ್ನು ನೋಡಿದ ಸ್ಥಳ, ಸುಗ್ರೀವನ ಸ್ನೇಹ, ವಾಲಿಯ ವಧೆ, ಸೀತೆಯನ್ನು ಹುಡುಕುವುದಕ್ಕೆ ಕಪಿ ವೀರರನ್ನು ಕಳುಹಿಸಿದ್ದು—ಮುಂತಾದ ವಿಷಯವನ್ನು ವಿಸ್ತಾರವಾಗಿ ಸೀತೆಗೆ ಹೇಳಿದನು. ಅನಂತರ ಶ್ರೀರಾಮನ ಸದ್ಗುಣವನ್ನು ಹೀಗೆ ವರ್ಣಿಸಿದನು. ಕಮಲದಂತೆ ಕಣ್ಣುಳ್ಳವನು ಶ್ರೀರಾಮನು. ಸಮಸ್ತ ಪ್ರಾಣಿಗಳನ್ನು ಆಕರ್ಷಿಸತಕ್ಕ ಸೌಂದರ್ಯವುಳ್ಳವನು. ಸೂರ್ಯನ ತೇಜಸ್ಸಿಗೆ ಸಮಾನ ವಾದ ತೇಜಸ್ಸುಳ್ಳವನು. ಕ್ಷಮೆಯಲ್ಲಿ ಭೂಮಿಗೆ ಸಮ. ಬುದ್ಧಿಯಲ್ಲಿ ಬೃಹಸ್ಪತಿಯನ್ನು ಮೀರಿಸಿದವನು. ಗುರುವಿನಲ್ಲಿ ಅತಿ ವಿನಯವುಳ್ಳವನು. ವೇದವಿತ್ತುಗಳಿಗೆ ಪೂಜಾರ್ಹನು. ಧನುರ್ವೇದಗಳಲ್ಲಿ ಪಂಡಿತನು. ವಿಸ್ತಾರವಾದ ಹೆಗಲುಳ್ಳವನು. ಉದ್ದವಾದ ತೋಳುಗಳುಳ್ಳವನು. ಚಕ್ರವರ್ತಿ ಲಕ್ಷಣಗಳುಳ್ಳವನು. ಅವನ ತೋಳು, ತೊಡೆ, ಮೊಳಕಾಲು ಕೆನ್ನೆ ಇವು ನಾಲ್ಕೂ ಸಮನಾಗಿರುವುವು. ಅಂತಹ ಸುಂದರ ಶ್ರೀರಾಮ ನನ್ನು ತಾನು ಋಷ್ಯಮೂಕ ಪರ್ವತದಲ್ಲಿ ಕಂಡುದಾಗಿಯೂ, ಅವನು ವಾನರರಿಗಿತ್ತ ಅಪ್ಪಣೆ, ಸಂಪಾತಿಯ ದರ್ಶನ, ಲಂಕಾ ಪ್ರವೇಶ ಎಲ್ಲವನ್ನೂ ವಿಶದವಾಗಿ ಸೀತಾದೇವಿಗೆ ತಿಳಿಸಿದನು. ಆಗ ಅವನು ರಾವಣನಿಂದ ಕಳುಹಿಸಲ್ಪಟ್ಟವನಲ್ಲವೆಂದು ಸೀತಾದೇವಿಗೆ ಧೈರ್ಯವಾಯಿತು.

ಸೀತಾದೇವಿಗೆ ಇನ್ನೂ ಹೆಚ್ಚಿನ ನಂಬಿಕೆ ಹುಟ್ಟಿಸುವುದಕ್ಕಾಗಿ ಶ್ರೀರಾಮಾಂಕಿತದ ಉಂಗುರವನ್ನು ಅವಳ ಕೈಯಲ್ಲಿ ಕೊಟ್ಟು, ಇನ್ನು ಅವಳ ದುಃಖಕಾಲ ಕೊನೆಗಾಣುವುದೆಂದು ಧೈರ್ಯ ಹೇಳಿದನು. ಶ್ರೀರಾಮನನ್ನು ನೋಡಿದಷ್ಟು ಸಂತೋಷವಾಯಿತು ಸೀತಾದೇವಿಗೆ. ಆಂಜನೇಯನನ್ನು ಮನ್ನಿಸುತ್ತ ಅವನನ್ನು ಹೊಗಳಿದಳು. 'ಎಲೈ! ವಾನರೋತ್ತಮನೇ! ನಿನ್ನಂತಹ ಪರಾಕ್ರಮಿಯು ಯಾರೂ ಇಲ್ಲ. ನೀನು ಮಹಾ ಪ್ರಾಜ್ಞನು, ಸಮರ್ಥನು, ನೂರು ಯೋಜನದಗಲದ ಸಮುದ್ರವನ್ನು ದಾಟುವುದಕ್ಕೆ ನಿನ್ನಿಂದ ಸಾಧ್ಯವಾಯಿತೇ ವಿನಹ ಇನ್ಯಾರಿಂದಲೂ ಆಗುತ್ತಿರಲಿಲ್ಲ. ರಾವಣನ ವಿಷಯದಲ್ಲಿ ನಿನಗೆ ಸ್ವಲ್ಪವೂ ಭಯವಿಲ್ಲದಿರುವುದನ್ನು ನೋಡಿದರೆ ನೀನು ಸಾಮಾನ್ಯನಲ್ಲ. ಶ್ರೀರಾಮನ ಮಾತಿನ ಮೇಲೆ ನೀನು ಬಂದಿರುವೆಯಾದ್ದರಿಂದ ಅವನು ನಿನ್ನ ಸಾಮರ್ಥ್ಯವನ್ನೂ, ಧೈರ್ಯವನ್ನೂ ತಿಳಿದೇ ಈ ಕಾರ್ಯದಲ್ಲಿ ನಿನ್ನನ್ನು ನೇಮಿಸಿದನು. ಎಲೈ! ಕಪಿಶ್ರೇಷ್ಠನೇ! ಶ್ರೀರಾಮನು ಕೃಶನಾಗಿಲ್ಲ ತಾನೆ? ಪರಂತಪನಾದ ರಾಮನು ಸಾಮದಾನ ಉಪಾಯಗಳನ್ನು ನಡೆಸುತ್ತಿರುವನಷ್ಟೆ? ಇಷ್ಟ ದೇವತಾ ಪ್ರಾರ್ಥನೆ ಮಾಡುತ್ತಿರುವನೆ? ಯಾವಾಗಲೂ ಸುಖವನ್ನನುಭವಿಸುವುದಕ್ಕೆ ಅರ್ಹನು ಅವನು. ಅವನಿಗೆ ದುಃಖ ಒದಗಿತು. ಈ ಮಹಾ ವಿಪತ್ತಿನಿಂದ ಅವನು ನನ್ನನ್ನು ಪಾರುಮಾಡುವನೆ? ಇಲ್ಲಿಗೆ ಬಂದು ರಾವಣ ಸಮೂಹವನ್ನು ನಾಶಮಾಡುವನೇ? ಅಂಜನಾತನಯನೇ! ಶ್ರೀರಾಮನಿಗೆ ನಾನು ಪರತಂತ್ರಳು. ಈ ದೇಹ ಅವನಿಗೆ ಸೇರಿದ್ದು. ಇದನ್ನು ಬಿಡುವುದಕ್ಕೆ ಕೂಡ ನನಗೆ ಸ್ವಾತಂತ್ರ್ಯವಿಲ್ಲ. ಅವನು ಬರುವವರೆಗೂ, ಈ ದೇಹವನ್ನು ನಾನು ಧರಿಸಿರಲೇಬೇಕು' ಎಂದು ಮಧುರವಾಗಿ ಹೇಳಿದಳು.

ಆಮೇಲೆ ಹನುಮಂತನು ಅವಳಿಗೆ ಧೈರ್ಯ ಹೇಳಿದನು. ಶ್ರೀರಾಮನಿಗೆ ವಿಷಯ ತಿಳಿದಿದ್ದರೆ, ಇಷ್ಟರೊಳಗೆ ಅವನು ಅಲ್ಲಿಗೆ ಬರುತ್ತಿದ್ದನು. ಯಾವ ಉತ್ತಮ ವಸ್ತುವನ್ನು ನೋಡಿದರೂ, ಸೀತಾದೇವಿಯನ್ನೇ ಸ್ಮರಿಸಿಕೊಂಡು ವಿಲಪಿಸುವನು. ಆದುದರಿಂದ ಜಾಗ್ರತೆಯಾಗಿ ಲಂಕಾಪಟ್ಟಣಕ್ಕೆ ಬಂದು ರಾವಣ ಸಮೂಹವನ್ನು ನಾಶಮಾಡುವನೆಂದು ಹೇಳಿದನು.

ಅನಂತರ ಸೀತಾದೇವಿಯು ತನ್ನ ಸೆರಗಿನಲ್ಲಿ ಕಟ್ಟಿದ್ದ ಚೂಡಾಮಣಿಯನ್ನು ಹನುಮಂತನಿಗೆ ಕೊಟ್ಟು ಶ್ರೀರಾಮನಿಗೆ ಗುರುತಾಗಿ ಕೊಡುವಂತೆ ತಿಳಿಸಿದಳು. ಅದನ್ನು ಹನುಮಂತನು ವಿನಯಪೂರ್ವಕವಾಗಿ ತೆಗೆದುಕೊಂಡು, ನಮಸ್ಕರಿಸಿ, ಅವಳ ಅಪ್ಪಣೆಯನ್ನು ಪಡೆದು ಅಶೋಕವನವನ್ನು ಭಂಗಪಡಿಸಲು ಪ್ರಾರಂಭಿಸಿದನು. ಸಾಧ್ಯವಾದರೆ ರಾವಣನಿಗೆ ತನ್ನ ಶಕ್ತಿಯನ್ನು ತೋರಿಸಬೇಕೆಂಬುದು ಅವನ ಅಪೇಕ್ಷೆಯಾಗಿತ್ತು.

ರಾವಣನಿಗೆ ಅತ್ಯಂತ ಪ್ರಿಯವಾಗಿದ್ದ ಅಶೋಕವನವನ್ನು ನುಗ್ಗಿ ಹನುಮಂತನು ಮರಗಳನ್ನು ಮುರಿದನು. ಗಿಡಗಳನ್ನೂ, ಹೂವಿನ ಬಳ್ಳಿಗಳನ್ನೂ ಕಿತ್ತುಹಾಕಿದನು. ಜಲಾಶಯಗಳನ್ನು ಒಡೆದು ಪುಡಿಮಾಡಿದನು. ಲತಾಗೃಹಗಳನ್ನೂ ಕೆಡವಿಬಿಟ್ಟನು. ತನ್ನ ಆಕಾರವನ್ನು ಮಹತ್ತಾಗಿ ಬೆಳೆಸಿ, ವನವನ್ನು ಭಂಗಪಡಿಸುತ್ತಿರುವಾಗ, ರಾಕ್ಷಸ ಸ್ತ್ರೀಯರು ಭಯಪಟ್ಟು ಓಡಿದರು. ಕಪಿಯು ಮಾಡಿದ ಚೇಷ್ಟೆಗಳನ್ನು ರಾವಣನಿಗೆ ತಿಳಿಸಿದರು. ರಾವಣನ ಅಪ್ಪಣೆಯಂತೆ ಅನೇಕ ರಾಕ್ಷಸರು ಆ ಕಪಿಯನ್ನು ಹಿಡಿಯುವುದಕ್ಕೆ ಬಂದರು. ಹನುಮಂತನು ಮರದ ಕೊಂಬೆಯನ್ನು ಮುರಿದು ಅವರನ್ನೆಲ್ಲಾ ಅದರಿಂದ ಬಡಿದು ಓಡಿಸಿಬಿಟ್ಟನು. ಆದರೂ ಅವರು ಮರೆಯಲ್ಲಿ ನಿಂತು ಹನುಮಂತನನ್ನು ಹೊಡೆಯುವುದಕ್ಕೆ ಯತ್ನಿಸುತ್ತಿದ್ದರು. ಇದನ್ನು ಕಂಡು ಹನುಮಂತನು ಕೋಪಗೊಂಡು, ಉದ್ಯಾನದ ದೊಡ್ಡ ಬಾಗಿಲನ್ನು ಕಿತ್ತು, ಚಕ್ರಗತಿಯಿಂದ ಅದನ್ನು ತಿರುಗಿಸಿ ರಾಕ್ಷಸರನ್ನು ಹೊಡೆದೋಡಿಸಿಬಿಟ್ಟನು.

ಆಮೇಲೆ ಅಶೋಕವನದಲ್ಲಿದ್ದ ದೊಡ್ಡ ಪ್ರಾಸಾದವನ್ನೇರಿದನು. ಅಲ್ಲಿ ಕಾವಲಿದ್ದ ಕೆಲವು ರಾಕ್ಷಸರೆಲ್ಲಾ ಹನುಮಂತನ ಶಕ್ತಿಯನ್ನೂ, ಆಕಾರವನ್ನೂ ನೋಡಿ ಹೆದರಿ ಮೂರ್ಛೆಹೋದರು. ಇನ್ನು ಕೆಲವು ರಾಕ್ಷಸರು ಕತ್ತಿ, ಈಟಿ, ಗಂಡುಕೊಡಲಿಗಳನ್ನು ಹನುಮಂತನ ಮೇಲೆ ಎಸೆಯುತ್ತ ಅವನನ್ನು ಮುತ್ತಿದರು. ಹನುಮಂತನು ಆ ಪ್ರಾಸಾದದ ಕಂಭವನ್ನೇ ಕಿತ್ತು ಗಿರ್ರನೆ ತಿರುಗಿಸಿ ರಾಕ್ಷಸರ ಮೇಲೆ ಬಿಟ್ಟನು. ಅನಂತರ ಪ್ರಹಸ್ತ, ಜಂಬುಮಾಲಿ, ವಿರೂಪಾಕ್ಷ, ಅಕ್ಷಯಕುಮಾರಾದಿ ರಾಕ್ಷಸ ವೀರರು ಒಬ್ಬೊಬ್ಬರಾಗಿ ಹನುಮಂತನನ್ನು ಎದುರಿಸಿ, ಸೋತು ಓಡಿದರು.

ಹನುಮಂತನ ಘೋರ ಯುದ್ಧವನ್ನು ನೋಡಿ ಸೂರ್ಯನು ತಣ್ಣಗಾದನು. ವಾಯುವು ನಿಶ್ಚಲನಾದನು. ಸಮುದ್ರವು ಕಲಕಿಹೋಯಿತು. ಈ ಯುದ್ಧ ದಲ್ಲಿ ಅಕ್ಷಯಕುಮಾರನ ರಥವು ಪುಡಿಪುಡಿಯಾಯಿತು. ಅವನ ಕಾಲು ಹಿಡಿದು ಹನುಮಂತನು ಅವನನ್ನು ಗಿರಗಿರನೆ ತಿರುಗಿಸಿ, ನೆಲಕ್ಕೆ ಬಡಿದು ಕುಕ್ಕಿಬಿಟ್ಟನು. ಮೂಳೆಗಳೆಲ್ಲಾ ಮುರಿದುಹೋಗಿ ಅವನು ಸತ್ತುಬಿದ್ದನು.

ರಾವಣನಿಗೆ ಆಗ ಸ್ವಲ್ಪ ಭಯವಾಯಿತು. ಇಂದ್ರಜಿತ್ತನ್ನು ಕರೆದು, ಆ ಕಪಿಗೆ ತಕ್ಕ ಪ್ರತೀಕಾರ ಮಾಡಿಬರುವಂತೆ ಹೇಳಿದನು. ಇಂದ್ರಜಿತ್ತು ಮಹಾವೀರ. ಎಲ್ಲ ಅಸ್ತ್ರಗಳನ್ನೂ ಬಲ್ಲವನು. ಧನುರ್ಧಾರಿಗಳಲ್ಲಿ ಶ್ರೇಷ್ಠನು. ಇಂತಹ ಶೂರನು ಯುದ್ಧಕ್ಕೆ ಬರುವುದನ್ನು ಕಂಡು ಹನುಮಂತನಿಗೆ ಸಂತೋಷವಾಯಿತು. ಇಬ್ಬರಿಗೂ ದೊಡ್ಡ ಯುದ್ಧವಾಯಿತು. ಇಬ್ಬರೂ ಮಹಾರಥರು. ಬಲಾಢ್ಯರು. ಪ್ರಚಂಡವೇಗವುಳ್ಳವರು. ಇಂದ್ರಜಿತ್ತು ಬಿಟ್ಟ ಬಾಣಗಳನ್ನೆಲ್ಲಾ ಹನುಮಂತನು ವಿಫಲಗೊಳಿಸಿದನು. ಇದನ್ನು ನೋಡಿ ಅವನಿಗೆ ಚಿಂತೆಯಾಯಿತು. ಕೊನೆಗೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಬಿಟ್ಟನು. ಬ್ರಹ್ಮನ ವರಬಲದಿಂದ ಹನುಮಂತನು ಬಂಧಿಸಲ್ಪಟ್ಟವನಂತಾ ದನು. ಅಷ್ಟರೊಳಗೆ ರಾಕ್ಷಸರು ಓಡಿಬಂದು ಹಗ್ಗ ಹುರಿಗಳಿಂದ ಅವನನ್ನು ಕಟ್ಟಿದರು. ಬ್ರಹ್ಮಾಸ್ತ್ರದ ಕಟ್ಟು ಬಿಟ್ಟುಹೋಯಿತು. ಆಮೇಲೆ ರಾಕ್ಷಸರು ಅವನನ್ನು ರಾವಣನ ಆಸ್ಥಾನಕ್ಕೆ ಕರೆದುಕೊಂಡು ಹೋದರು. ಅವನಿಗೂ ಅದೇ ಬೇಕಿತ್ತು. ರಾವಣನನ್ನು ನೋಡಬೇಕೆಂದು ಕುತೂಹಲ ಅವನಿಗೆ. ರಾಕ್ಷಸರಾಜನೆದುರಿಗೆ ಅವನನ್ನು ನಿಲ್ಲಿಸಿದಾಗ, ಸಿಂಹಾಸನಾರೂಢನಾಗಿದ್ದ ರಾವಣನನ್ನು ಕಂಡು ಹನುಮಂತನಿಗೆ ಆಶ್ಚರ್ಯವಾಯಿತು.

ಈ ರಾಕ್ಷಸವೀರನ ಬಲ, ಧೈರ್ಯ, ತೇಜಸ್ಸನ್ನು ಕಂಡು ಹನುಮಂತನು ಆಶ್ಚರ್ಯಪಟ್ಟನು. ಸಮಸ್ತ ರಾಜಲಕ್ಷಣಗಳಿಂದ ಕೂಡಿರು ವನಲ್ಲಾ ? ಮಹತ್ತಾದ ಇದೊಂದು ಅಧರ್ಮಕ್ಕೆ ಇವನು ಪ್ರವೇಶ ಮಾಡದಿದ್ದ ಭಾಗದಲ್ಲಿ ಸಮಸ್ತ ದೇವತೆಗಳಿಗೂ ಪ್ರಭುವಾಗುವಷ್ಟು ಯೋಗ್ಯತೆ ಪಡೆಯುತ್ತಿದ್ದನಲ್ಲವೇ ? ಸಮಸ್ತ ಲೋಕವೂ ಇವನ ವಶವಾಗು ತ್ತಿತ್ತಲ್ಲವೇ ? ಎಂತಹ ಅಕಾರ್ಯ ಮಾಡಿಬಿಟ್ಟನು ಇವನು, ಎಂದು ಯೋಚಿಸಿದನು!

ಎದುರಿಗೆ ನಿಂತಿರುವ ಹನುಮಂತನನ್ನು ನೋಡಿ ರಾವಣನಿಗೆ ಕೋಪ ಬಂದಿತು. ಕೂಡಲೇ ಚಿಂತೆಯೂ ಹುಟ್ಟಿತು. ಹಿಂದೆ ತನ್ನನ್ನು ಶಪಿಸಿದ ನಂದಿಯೇ ಈ ರೂಪದಲ್ಲಿ ಬಂದಿರುವನೋ? ತನಗೆ ವೈರಿಯಾದ ಇಂದ್ರ ನೇನಾದರೂ ಈ ಕಪಿಯನ್ನು ಕಳುಹಿಸಿರುವನೋ? ಕುಬೇರ, ಯಮ, ವರುಣ, ವಿಷ್ಣು—ಇವರೇನಾದರೂ ಇವನನ್ನು ಕಳುಹಿಸಿರುವರೋ? ಇದೇನು ಸಾಮಾನ್ಯ ಕಪಿಯಂತೆ ಕಾಣುವುದಿಲ್ಲ ಎಂದು ಯೋಚಿಸಿ, ಆ ಕಪಿಯ ನಿಜಸ್ಥಿತಿಯನ್ನು ವಿಚಾರಿಸುವಂತೆ ತನ್ನ ಮಂತ್ರಿಗೆ ರಾವಣನು ಅಪ್ಪಣೆ ಇತ್ತನು. ಅವನ ಪ್ರಶ್ನೆಗಳಿಗೆ ಹನುಮಂತನು ಈ ರೀತಿ ಉತ್ತರ ಕೊಟ್ಟನು.

'ಎಲೈ ರಾಕ್ಷಸರಾಜನೇ? ನಾನು ಯಾರ ದೂತನಾಗಿಯೂ ಬಂದಿಲ್ಲ. ವಿಷ್ಣುವು ನನ್ನನ್ನು ಕಳುಹಿಸಲಿಲ್ಲ. ಕುಬೇರನಿಗೂ ನನಗೂ ಸ್ನೇಹವಿಲ್ಲ. ನಾನೊಬ್ಬ ವಾನರ ನಿಜ. ನಿನ್ನನ್ನು ನೋಡಬೇಕೆಂಬ ಕುತೂಹಲದಿಂದ ನಿನ್ನ ತೋಟವನ್ನು ಹಾಳುಮಾಡಿದೆ. ಯಾವ ಅಸ್ತ್ರವೂ ನನ್ನನ್ನು ಕಟ ಲಾರದು. ನಿನ್ನಂತೆ ನಾನೂ ಬ್ರಹ್ಮನಿಂದ ವರ ಪಡೆದಿದ್ದೇನೆ. ನಿನಗೆ ಒಂದೆರಡು ಮಾತುಗಳನ್ನು ಹೇಳಬೇಕೆಂದೇ ನಾನು ಇಲ್ಲಿಗೆ ಬಂದುದು. ರಾಕ್ಷಸೇಂದ್ರಾ! ನನ್ನೊಡೆಯ ಸುಗ್ರೀವ ರಾಜನು ನನ್ನನ್ನು ಇಲ್ಲಿಗೆ ಕಳುಹಿಸಿದನು. ಸಮರ್ಥನಾದ ಶ್ರೀರಾಮನು ತನ್ನ ತಂದೆಯ ಮಾತನ್ನು ಪಾಲಿಸುವುದಕ್ಕಾಗಿ ಪತ್ನಿಯಾದ ಸೀತೆ, ತಮ್ಮನಾದ ಲಕ್ಷ್ಮಣನೊಡನೆ ವನವಾಸಕ್ಕೆ ಬಂದನು. ಜನಸ್ಥಾನವೆಂಬ ಅರಣ್ಯದಲ್ಲಿ ಸೀತೆಯನ್ನು ಕಳೆದುಕೊಂಡನು. ಅವಳನ್ನು ಹುಡುಕುತ್ತಾ, ಋಷ್ಯಮೂಕಪರ್ವತಕ್ಕೆ ಬಂದನು. ಅಲ್ಲಿ ಅವನಿಗೂ ಸುಗ್ರೀವನಿಗೂ ಸ್ನೇಹವಾಯಿತು. ರಾಮನು ಸುಗ್ರೀವನ ಅಣ್ಣನಾದ ವಾಲಿಯನ್ನು ಕೊಂದು, ಸುಗ್ರೀವನಿಗೆ ವಾನರ ರಾಜ್ಯದ ಪಟ್ಟ ಕಟ್ಟಿದನು. ಆಮೇಲೆ ವಾನರರನ್ನೆಲ್ಲಾ ಕರೆದು ಸೀತೆಯನ್ನು ಹುಡುಕುವುದಕ್ಕೆ ಕಳುಹಿಸಿದನು. ಅಂತಹ ವಾನರ ವೀರರಲ್ಲಿ ನಾನೊಬ್ಬ. ನನ್ನ ಹೆಸರು ಹನುಮಂತ. ಎಲೈ! ರಾವಣರಾಜಾ! ನೀನು ತಪಸ್ಸು ಮಾಡಿದವನು. ಶೂರ. ಧೈರ್ಯಶಾಲಿ. ಬುದ್ಧಿವಂತನು. ವೇದಾಧ್ಯಯನಸಂಪನ್ನ. ಹೀಗಿದ್ದರೂ ಈ ಅಕಾರ್ಯ ಮಾಡಬಹುದೇ? ಸೀತೆಯನ್ನು ಕದ್ದು

ತರಬಹುದೇ ? ಈ ದುಷ್ಕೃತ್ಯವನ್ನು ಪರಿಹರಿಸಲು ನಿನ್ನಿಂದ ಸಾಧ್ಯವೇ? ಖಂಡಿತ ಸಾಧ್ಯವಿಲ್ಲ. ಧರ್ಮದ ಮುಂದೆ ಅಧರ್ಮ ನಿಜವಾಗಿ ನಿಲ್ಲು ವುದಿಲ್ಲ.

'ಓ! ರಾಕ್ಷಸೇಂದ್ರಾ! ಶ್ರೀರಾಮನು ಸಾಮಾನ್ಯನಲ್ಲ. ಅವನ ಬಾಣದ ಮುಂದೆ ಜಗತ್ತಿನಲ್ಲಿ ಯಾರೂ ನಿಲ್ಲಲಾರರು. ಅದರಲ್ಲೂ ನೀನು ಹೇಯಕಾರ್ಯ ಮಾಡಿರುವೆ. ನೀನು ಹೇಗೆತಾನೆ ಅವನೆದುರು ನಿಲ್ಲಬಲ್ಲೆ ? ನನ್ನ ರಾಜನಾದ ಸುಗ್ರೀವನು ಈ ಮಾತುಗಳನ್ನು ನಿನಗೆ ಹೇಳುವಂತೆ ತಿಳಿಸಿರುವನು. ಸೀತಾದೇವಿಯನ್ನು ಶ್ರೀರಾಮನಿಗೊಪ್ಪಿಸು. ಆಕೆಯನ್ನು ನೀನು ಖಂಡಿತ ದಕ್ಕಿಸಿಕೊಳ್ಳಲಾರೆ. ಶರಣನಾದ ನಿನ್ನನ್ನು ಶ್ರೀರಾಮನು ನಿಜವಾಗಿ ಮನ್ನಿಸುವನು. ದೇವಾಸುರಾದಿಗಳಿಂದ ಮರಣವುಂಟಾಗದಿರಲಿ ಎಂದು ನೀನು ಬ್ರಹ್ಮನಿಂದ ವರ ಪಡೆದೆಯೇ ವಿನಹ, ಮಾನವರಿಂದಾಗಲಿ, ವಾನರರಿಂದಾಗಲಿ ಸಾವುಂಟಾಗದಂತೆ ನೀನು ವರ ಪಡೆಯಲಿಲ್ಲ. ನಮ್ಮ ರಾಜನಾದ ಸುಗ್ರೀವನು ಅಸುರನಲ್ಲ. ಗಂಧರ್ವನೂ ಅಲ್ಲ. ಯಕ್ಷನನ್ನಾಗ ನಾಗನೂ ಅಲ್ಲ. ಸುಗ್ರೀವನ ಕೈಯಿಂದ ನೀನು ಸಾಯದೆ ಹೇಗೆ ತಾನೆ ಉಳಿಯುವೆ ?

'ಎಲೈ! ರಾಕ್ಷಸರಾಜಾ! ಈ ಉಪದೇಶಗಳೆಲ್ಲಾ ಏಕೆಂದು ಕೇಳು ವಿಯಾ ? ಹೇಳುವೆನು ಕೇಳು. ಧರ್ಮದ ಮುಂದೆ ಅಧರ್ಮ ಎಂದಾದರೂ ನಿಂತೀತೇ ? ಧರ್ಮವು ಅಧರ್ಮವನ್ನು ನಾಶಮಾಡುವುದು. ನೀನು ಮಾಡಿದ ಧರ್ಮವೆಲ್ಲಾ, ಗಳಿಸಿದ ಪುಣ್ಯವೆಲ್ಲಾ ಈ ಒಂದು ಅಧರ್ಮದಿಂದ ಅಳಿಸಿಹೋಗುವುದು. ಧರ್ಮಾಧರ್ಮ ವಿಷಯ ಹಾಗಿರಲಿ. ಶ್ರೀರಾಮನು ಸಾಮಾನ್ಯ ಮನುಷ್ಯನೆಂದು ನೀನು ತಿಳಿದಿರುವ ಪಕ್ಷದಲ್ಲಿ ನೀನು ನಿಜವಾಗಿ ಮೋಸಹೋಗಿರುವೆ. ಜನಸ್ಥಾನದಲ್ಲಿ ತಾನೊಬ್ಬನೇ ನಿಂತು ಸಾವಿರಾರು ರಾಕ್ಷಸರನ್ನು ಕೊಲ್ಲಲಿಲ್ಲವೇ ? ಬಲಶಾಲಿಯಾದ ವಾಲಿಯನ್ನು ಒಂದೇ ಬಾಣದಿಂದ ವಧಿಸಲಿಲ್ಲವೇ ? ನಾನೊಬ್ಬನೇ ಈಗ ನಿನ್ನನ್ನು, ನಿನ್ನ ಸಮೂಹವನ್ನೆಲ್ಲಾ ಕೊಂದು, ಲಂಕೆಯನ್ನು ನಾಶಮಾಡಿ, ಸೀತೆಯನ್ನು ರಾಮನಿಗೊಪ್ಪಿಸಬಲ್ಲೆ. ಆದರೆ ಹಾಗೆ ಮಾಡಲು ನನಗೆ ಶ್ರೀರಾಮನ ಅಪ್ಪಣೆಯಿಲ್ಲ. ಸೀತಾದೇವಿಯು ಸಾಮಾನ್ಯಳಲ್ಲ. ಲಂಕೆಯನ್ನು ದಹಿಸಲು

ಬಂದಿರುವ ಕಾಳರಾತ್ರಿ ಅವಳೇ ಎಂದು ತಿಳಿ. ಅವಳ ಕೋಪದಿಂದ ಈಗಾಗಲೇ ಅರ್ಧ ಲಂಕೆ ಸುಟ್ಟುಹೋಗಿದೆ. ಶ್ರೀರಾಮನ ಕೋಪದಿಂದ ಅದು ಪೂರ್ಣವಾಗಿ ದಹಿಸಿಹೋಗುವುದು.

'ರಾವಣಾ ! ನಿನ್ನ ಪಾಪಕಾರ್ಯದಿಂದ ನೀನೊಬ್ಬನಲ್ಲದೆ, ನಿನ್ನ ಸಹೋದರರು, ಮಕ್ಕಳು, ಮರಿಮಕ್ಕಳು, ಜ್ಞಾತಿಗಳು, ಬಂಧುಗಳು, ಪ್ರಜೆಗಳು ಎಲ್ಲರೂ ಸಾಯುವರು. ಸರ್ವನಾಶವಾಗುವುದು. ನಾನು ಶ್ರೀರಾಮನ ರಾಯಭಾರಿಯಾಗಿ ಬಂದಿದ್ದೇನೆ. ನಾನು ನಿನ್ನ ಹಾಗೆ ರಾಕ್ಷಸನಲ್ಲ. ರಾಮನಂತೆ ಮನುಷ್ಯನೂ ಅಲ್ಲ. ನಿಮ್ಮಿಬ್ಬರಿಗೂ ಮಧ್ಯಸ್ಥ ನಾದ ವಾನರನು. ನನ್ನ ಮಾತು ಸತ್ಯವೆಂದು ತಿಳಿ. ಶ್ರೀರಾಮನೊಡನೆ ನೀನು ಖಂಡಿತ ಯುದ್ಧಮಾಡಿ ಜಯಿಸಲಾರೆ. ಮುಕ್ಕಣ್‌ಮೂರ್ತಿಯಾದ ರುದ್ರನಾಗಲಿ, ಅಯೋನಿಜನಾದ ಬ್ರಹ್ಮನಾಗಲಿ, ತ್ರಿಲೋಕಾಧಿಪತಿ ಯಾದ ಇಂದ್ರನೇ ಆಗಲಿ ಯಾರೂ ನಿನ್ನನ್ನು ರಕ್ಷಿಸಲಾರರು. ಸರ್ವ ಲೋಕೇಶ್ವರನೂ, ರಾಜಸಿಂಹನೂ ಆಗಿರುವ ಶ್ರೀರಾಮನನ್ನು ನೀನು ಮರೆಹೊಗು. ಅದೊಂದೇ ನಿನಗಿರುವ ಮಾರ್ಗ. ನನ್ನ ಮಾತನ್ನು ನಂಬು' ಎಂದು ಹನುಮಂತನು ನಯ, ವಿನಯ, ಭಯಗಳಿಂದ ವಿಸ್ತಾರ ವಾಗಿ ಎಲ್ಲವನ್ನೂ ತಿಳಿಸಿದನು.

ಮೂರ್ಖರಿಗೆ ಹಿತನುಡಿಗಳು ರುಚಿಸುವುದಿಲ್ಲ. ಬುದ್ಧಿಮಾತುಗಳನ್ನು ಅವರು ಲಕ್ಷಿಸುವುದಿಲ್ಲ. ರಾವಣನಿಗೂ ಹಾಗೆಯೇ ಆಯಿತು. ಅತಿಯಾದ ಕೋಪದಿಂದ ಕಟಕಟನೆ ಹಲ್ಲು ಕಡಿಯುತ್ತ, ಹನುಮಂತನನ್ನು ಕೊಲ್ಲು ವಂತೆ ರಾಕ್ಷಸರಿಗೆ ಅಪ್ಪಣೆ ಮಾಡಿದನು. ದೂತಕಾರ್ಯಕ್ಕೆ ಬಂದವನನ್ನು ಕೊಲ್ಲುವುದು ರಾಜಧರ್ಮಕ್ಕೆ ವಿರುದ್ಧವೆಂದು ನೀತಿವಂತನಾದ ವಿಭೀಷಣನು ಸಲಹೆ ಇತ್ತನು. ಅನಂತರ ರಾವಣನು ಸ್ವಲ್ಪ ಯೋಚನೆ ಮಾಡಿ, ಕಪಿಗಳಿಗೆ ಅಲಂಕಾರಪ್ರಾಯವಾದ ಬಾಲಕ್ಕೆ ಬೆಂಕಿ ಹಚ್ಚಿಸಿ ಸುಟ್ಟುಬಿಡು ವಂತೆಯೂ, ಪಟ್ಟಣದ ಬೀದಿ ಬೀದಿಯಲ್ಲಿ ಮೆರವಣಿಗೆ ಮಾಡುವಂತೆಯೂ ರಾವಣನು ತನ್ನ ಪರಿವಾರಕ್ಕೆ ತಿಳಿಸಿದನು. ರಾಕ್ಷಸರು ಬಂದು ಹನುಮಂತನ ಬಾಲಕ್ಕೆ ಬಟ್ಟೆ ಸುತ್ತಿದಷ್ಟೂ ಅದು ಬೆಳೆಯುತ್ತಲೇ ಇತ್ತು. ಈ ವಿಚಾರ ಊರಿನಲ್ಲೆಲ್ಲಾ ಹರಡಿತು. ಸೀತಾದೇವಿಗೂ ಗೊತ್ತಾಯಿತು. ಕೂಡಲೇ

ಅವಳು, ಅಗ್ನಿದೇವನಿಂದ ಅವನಿಗೆ ಯಾವ ತೊಂದರೆಯೂ ಉಂಟಾಗದಿರ ಲೆಂದು ಅಗ್ನಿಯನ್ನು ಪ್ರಾರ್ಥಿಸಿದಳು. ಬಾಲಕ್ಕೆ ಬೆಂಕಿಯನ್ನು ರಾಕ್ಷಸರು ಹತ್ತಿಸಿದರು. ಅದು ತಣ್ಣಗಿರುವುದನ್ನು ಕಂಡು ಹನುಮಂತನಿಗೆ ಆಶ್ಚರ್ಯ ವಾಯಿತು.

ತನಗೆ ಇಷ್ಟು ಉಪಕಾರಮಾಡಿದ ಅಗ್ನಿದೇವರಿಗೆ ಆಹುತಿ ಕೊಡ ಬೇಡವೇ ? ಹನುಮಂತನು ಕೂಡಲೇ ಮೇಲಕ್ಕೆ ಹಾರಿದನು. ಮನೆಯಿಂದ ಮನೆಗೆ ಹಾರುತ್ತಾ ಎಲ್ಲ ಕಡೆಗೂ ಬೆಂಕಿ ಇಟ್ಟನು. ರಾವಣನ ಅರಮನೆಗೂ ಅಗ್ನಿಪ್ರವೇಶವಾಯಿತು. ವಾಯುದೇವನೂ ಸಹಾಯ ಮಾಡಿದನು. ವಿಭೀಷಣನ ಮನೆಯೊಂದನ್ನು ಬಿಟ್ಟು ಲಂಕೆಯನ್ನೆಲ್ಲಾ ಅಗ್ನಿಗೆ ಆಹುತಿ ಕೊಟ್ಟನು. ಹೀಗೆ ಹನುಮಂತನು ಅಶೋಕವನವನ್ನು ಹಾಳುಮಾಡಿ, ಪ್ರಬಲ ರಾಕ್ಷಸರನ್ನು ಕೊಂದು, ರಾವಣನಿಗೆ ಬುದ್ಧಿ ಹೇಳಿ, ತನ್ನ ಅದ್ಭುತ ಶಕ್ತಿಯನ್ನು ಪ್ರದರ್ಶನಮಾಡಿ, ಲಂಕಾದಹನಮಾಡಿ, ಶ್ರೀರಾಘವನ ಸ್ಮರಣೆ ಮಾಡುತ್ತಾ, ಸಮುದ್ರವನ್ನು ದಾಟಿ, ಜಾಂಬವಾದಿ ಕಪಿನಾಯಕರು ಕಾಯುತ್ತಿದ್ದ ಸ್ಥಳಕ್ಕೆ ಬಂದನು. ಲಂಕೆಯಲ್ಲಿ ನಡೆದ ಸಮಸ್ತ ವಿಷಯ ವನ್ನೂ ಅವರಿಗೆ ತಿಳಿಸಿದನು.

ಅನಂತರ ಕಪಿನಾಯಕರೆಲ್ಲ ಹನುಮಂತನ ಮುಂದಾಳುತ್ವದಲ್ಲಿ ಕಿಷ್ಕಿಂಧೆಗೆ ಹೋಗಿ ಶ್ರೀರಾಮ, ಸುಗ್ರೀವಾದಿಗಳಿಗೆ ಎಲ್ಲವನ್ನೂ ತಿಳಿಸಿದರು. ಹನುಮಂತನು ಶ್ರೀರಾಮನಿಗೆ ಸೀತಾದೇವಿಯು ಕೊಟ್ಟಿದ್ದ ಚೂಡಾಮಣಿ ಯನ್ನು ಕೊಟ್ಟನು. ಶ್ರೀರಾಮನು ಸಮಸ್ತ ವಾನರ ಸೈನ್ಯದೊಡನೆ ಸಮುದ್ರತೀರಕ್ಕೆ ಬಂದು ನಳನಿಂದ ಸಮುದ್ರಕ್ಕೆ ಸೇತುವೆ ಕಟ್ಟಿಸಿ, ಲಂಕೆ ಯನ್ನು ಪ್ರವೇಶಮಾಡಿ, ಅಲ್ಲಿಂದ ಸಮಸ್ತ ರಾಕ್ಷಸರನ್ನೂ ಕೊಂದು, ಸೀತಾದೇವಿಯನ್ನು ಕರೆದುಕೊಂಡು ಅಯೋಧ್ಯೆಗೆ ಹಿಂದಿರುಗಿ ಬರುವನು. ಭರತನ ಪ್ರಾರ್ಥನೆಯಂತೆ ಶ್ರೀರಾಮನು ರಾಜ್ಯಭಾರವಹಿಸಿಕೊಳ್ಳುವನು. ಅವನ ಪಟ್ಟಾಭಿಷೇಕವು ವಿಜೃಂಭಣೆಯಿಂದ ನಡೆಯುವುದು. ಅನಂತರ ಎಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಪ್ರಯಾಣಮಾಡುವರು.

ಹನುಮಂತನು ಮಾತ್ರ ಅಲ್ಲಿಯೇ ಇದ್ದನು. ಸೀತಾರಾಮರು, ಲಕ್ಷ್ಮೀನಾರಾಯಣರ ಅವತಾರವೆಂದು ಅವಿಚ್ಛಿನ್ನ ಭಕ್ತಿಯನ್ನು ಪ್ರದರ್ಶನ

ಮಾಡಿದ ಮಹಾ ಜ್ಞಾನಿ ಹನುಮಂತ. ಅವನಷ್ಟು ಭಕ್ತಿಯನ್ನು, ವಿನಯವನ್ನು, ಸೇವೆಯನ್ನು ಸಲ್ಲಿಸಿದ ವ್ಯಕ್ತಿ ಜಗತ್ತಿನಲ್ಲಿ ಇನ್ಯಾರೂ ಇಲ್ಲ. ಭಕ್ತ ಪರಾಧೀನನಾದ ಶ್ರೀರಾಮನು ಈ ಕಾರಣದಿಂದಲೇ ಹನುಮಂತನನ್ನು ಚಿರಂಜೀವಿಯಾಗಿರುವಂತೆ ಹರಸಿದ್ದಾನೆ. ಹನುಮಂತನ ಅನುಪಮ ಗುಣಗಳನ್ನೂ, ಧೈರ್ಯವನ್ನೂ, ವಿದ್ಯೆಯನ್ನೂ, ಭಕ್ತಿಯನ್ನೂ, ನಯ ವಿನಯ ಸೌಶೀಲ್ಯಾದಿ ಸಮಸ್ತ ಸದ್ಗುಣಗಳನ್ನೂ ಮೆಚ್ಚಿ, ಶ್ರೀರಾಮನು 'ಆಂಜನೇಯಾ ! ನೀನು ಬ್ರಹ್ಮಪಟ್ಟಕ್ಕೆ ಯೋಗ್ಯನಾದವನು. ಇದಕ್ಕಾಗಿ ನೀನು ಕಾದಿರು. ಇದು ನನ್ನ ಸಂಕಲ್ಪ. ಇದಕ್ಕೆ ಭಂಗತರಬೇಡ. ನನ್ನ ಚರಿತ್ರೆಯನ್ನು ಜನರು ಜಗತ್ತಿನಲ್ಲಿ ಎಲ್ಲಿಯವರೆಗೆ ಜ್ಞಾಪಿಸಿಕೊಳ್ಳುವರೋ, ಅಲ್ಲಿಯವರೆಗೆ ನೀನು ಶಾಶ್ವತವಾಗಿರು. ನೀನು ಚಿರಂಜೀವಿ' ಎಂದು ಶ್ರೀರಾಮನು ಹೇಳಿದನು. ಅವನ ಮಾತು ಸತ್ಯ.

ಆದುದರಿಂದಲೇ, ಹನುಮಂತನನ್ನು ದೇವರೆಂದೇ ಜನರು ಪೂಜಿಸುವರು. ಇಂದೂ ಕೂಡ, ಗ್ರಾಮಗಳಲ್ಲಿ, ನಗರಗಳಲ್ಲಿ, ಎಲ್ಲೆಲ್ಲಿಯೂ ಹನುಮಂತರಾಯನ ದೇವಸ್ಥಾನಗಳಿವೆ.

# ವ್ಯಾಸರು

ಮಹಾಭಾರತವು ಕೌರವ ಪಾಂಡವರ ಕಥೆ. ಇದು ಅದ್ಭುತ ಇತಿಹಾಸ. ಇದರಲ್ಲಿ ಪುರಾಣ, ಚರಿತ್ರೆ, ಕಥೆ, ಉಪಾಖ್ಯಾನ, ಶಾಸ್ತ್ರ, ಧರ್ಮ, ನೀತಿ ಎಲ್ಲವೂ ಇವೆ. ಇದರಲ್ಲಿ ಉಪನಿಷತ್ತಿನ ಭಾವ ಇರುವುದರಿಂದ ಇದನ್ನು ಐದನೆಯ ವೇದ ಎಂದು ಹೇಳಲಾಗಿದೆ. ವೇದದಲ್ಲಿರುವಂತೆ ಮಹಾಭಾರತ ದಲ್ಲಿ ಧರ್ಮಮೂಲ ಇದೆ. ಎಲ್ಲಿ ಧರ್ಮ ಇರುವುದೋ, ಅಲ್ಲಿಯೇ ಜಯ ಎಂದು ಮಹಾಭಾರತ ಸಾರುತ್ತದೆ. ಇಂತಹ ಮಹಾಕಾವ್ಯವನ್ನು ಬರೆದವರು ವ್ಯಾಸರು. ಇವರು ಪರಾಶರ ಮಹರ್ಷಿಯ ಮಕ್ಕಳು. ಹುಟ್ಟುತ್ತಲೇ ಇವರು ತಂದೆಯೊಡನೆ ಆಶ್ರಮಕ್ಕೆ ಹೊರಟರು. ದೇವರ ದಯೆಯಿಂದ ಇವರಿಗೆ ಅಂತಹ ಶಕ್ತಿ ಬಂದಿತ್ತು.

ವ್ಯಾಸರು ದ್ವೀಪದ ಮಧ್ಯದಲ್ಲಿ ಹುಟ್ಟಿದುದರಿಂದ ದ್ವೈಪಾಯನ ಎಂಬ ಹೆಸರು ಬಂತು. ಕಪ್ಪಾಗಿದ್ದುದರಿಂದ ಕೃಷ್ಣನೆಂದು ಕರೆಯ ಲಾಯಿತು. ವೇದವನ್ನು ವಿಭಾಗಿಸಿದುದರಿಂದ ವೇದವ್ಯಾಸರಾದರು. ನಾರಾಯಣನ ಅಂಶದಿಂದ ಹುಟ್ಟಿದುದರಿಂದ ಇವರನ್ನು ನಾರಾಯಣ ಎಂದು ಋಷಿಗಳು ಕರೆದರು. ವಸಿಷ್ಠಕುಲದಲ್ಲಿ ಹುಟ್ಟಿದ ವ್ಯಾಸರು ಹಿಂದುಮುಂದಿನ ಯುಗದ ವೃತ್ತಾಂತವನ್ನು ತಿಳಿಯುವ ಶಕ್ತಿ ಪಡೆದರು. ಅಂತಹ ತಪೋಮಹಿಮೆ ಅವರದು.

ಮಹಾಭಾರತದಂತಹ ಮಹಾ ಗ್ರಂಥವನ್ನು ಬರೆಯುವುದಕ್ಕೆ ಸಾಮಾನ್ಯ ಮನುಷ್ಯರಿಂದ ಸಾಧ್ಯವೇ ಇಲ್ಲ. ಇದರ ಜೊತೆಗೆ ವ್ಯಾಸರು ಹದಿನೆಂಟು ಪುರಾಣಗಳನ್ನೂ, ಬ್ರಹ್ಮಸೂತ್ರವನ್ನೂ ಬರೆದಿದ್ದಾರೆ. ನಾನಾ ಧರ್ಮಗಳೂ, ಧರ್ಮರಹಸ್ಯಗಳೂ, ವ್ಯಾಸರಿಗೆ ತಿಳಿದಂತೆ ಇನ್ಯಾರಿಗೂ ತಿಳಿದಿರಲಿಲ್ಲ. ಅವರೊಬ್ಬ ಅವತಾರ ಪುರುಷರು. ಲೋಕೋಪಕಾರಾರ್ಥ ವಾಗಿ, ನ್ಯಾಯ, ನೀತಿ, ಧರ್ಮ ಎಲ್ಲವನ್ನೂ ಮಾನವಲೋಕ ತಿಳಿಯು ವಂತೆ ಮಾಡಿದ್ದಾರೆ.

ವ್ಯಾಸರು ಆಜನ್ಮ ಬ್ರಹ್ಮಚಾರಿ. ಪತ್ನಿ ಇಲ್ಲದೆ ಮಗನನ್ನು ಪಡೆಯ ಬೇಕೆಂದು ಇಷ್ಟಪಟ್ಟರು. ಮಹಾತ್ಮರಿಗೆ ಯಾವುದು ತಾನೆ ಅಸಾಧ್ಯ ? ಅವರ ಇಷ್ಟದಂತೆಯೇ ಆಯಿತು. ಯೋಗನಿಷ್ಠರಾಗಿ ಅವರು ಪರಮೇಶ್ವರ ನನ್ನು ಕುರಿತು ಮೇರುಪರ್ವತದಲ್ಲಿ ತಪಸ್ಸು ಮಾಡಿದರು. ಬಹುಕಾಲ ಪುತ್ರಾರ್ಥಿಯಾಗಿ ಮಾಡಿದ ತಪಸ್ಸು ಇದು. ಇಂತಹ ಕಠಿಣ ತಪಸ್ಸಿನಿಂದ ವ್ಯಾಸರ ದೇಹಶಕ್ತಿ ಕುಗ್ಗಲಿಲ್ಲ. ಬಳಲಿಕೆ ತೋರಲಿಲ್ಲ. ವ್ಯಾಸರ ಭಕ್ತಿಗೂ, ತಪಸ್ಸಿಗೂ ಮೆಚ್ಚಿ ಪರಮೇಶ್ವರನು, ಪಾರ್ವತೀ ಸಮೇತನಾಗಿ ವ್ಯಾಸರಿಗೆ ದರ್ಶನ ಕೊಟ್ಟನು. 'ದ್ವೈಪಾಯನಾ ! ಅಗ್ನಿ, ವಾಯು, ಭೂಮಿ, ಜಲ, ಆಕಾಶಗಳ ಹಾಗೆ ಪರಿಶುದ್ಧನಾದ ಮಗನನ್ನು ನೀನು ಪಡೆಯುವೆ. ಅವನು ಬ್ರಹ್ಮನಿಷ್ಠನಾಗಿ, ಬ್ರಹ್ಮಭಾವವನ್ನು ದೃಢವಾಗಿ ನಂಬಿ, ಆ ಪರಬ್ರಹ್ಮನನ್ನು ಆಶ್ರಯಿಸಿ, ಮೂರು ಲೋಕದಲ್ಲಿಯೂ ಬೆಳಗುವನು' ಎಂದು ಪರಮೇಶ್ವರನು ಹರಸಿದನು.

ಮಹಾ ರುದ್ರನಿಂದ ವರಪಡೆದ ಮೇಲೆ, ವ್ಯಾಸನು ಒಂದು ದಿನ ಆಶ್ರಮ ದಲ್ಲಿದ್ದಾಗ ಘೃತಾಚಿ ಎಂಬ ಅಪ್ಸರಸಿಯು, ಅಲ್ಲಿ ಸುಳಿದಾಡಿದಳು. ರೂಪವತಿಯೂ, ಲಾವಣ್ಯವತಿಯೂ ಆದ ಅವಳು ವ್ಯಾಸನ ಹತ್ತಿರ ಬರು ವುದಕ್ಕೆ ಹೆದರಿ, ಒಂದು ಗಿಣಿ ರೂಪವನ್ನು ತಾಳಿ, ಆಶ್ರಮಕ್ಕೆ ಬಂದಳು. ವ್ಯಾಸನಿಗೆ ಅದು ತಿಳಿಯದಿರುವುದೇ ? ಅದನ್ನು ಅವನು ಮರೆಯ ಲೆತ್ನಿಸಿದನು. ಅಗ್ನಿ ಕಾರ್ಯಕ್ಕಾಗಿ ಅರುಣಿಯನ್ನು ಕಡೆಯಲಾರಂಭಿ ಸಿದನು. ಅರುಣಿಯಿಂದ ಅಗ್ನಿ ಉತ್ಪತ್ತಿಯಾಯಿತು. ಅದರ ಜೊತೆ ಯಲ್ಲಿ ಒಂದು ಮಗುವೂ ಹುಟ್ಟಿತು. ಅರುಣಿಯ ಗರ್ಭದಲ್ಲಿ, ಶುಕ್ರ ತೇಜಸ್ಸೆಂಬ ಮಥನದಿಂದ ಹುಟ್ಟಿದ ಮಗುವಿಗೆ ಶುಕನೆಂಬ ನಾಮಕರಣ ಮಾಡಿದನು.

ಮಹಾತ್ಮನಾದ ಶುಕನು ಹುಟ್ಟಿದ ಕೂಡಲೆ, ಗಂಗೆಯು ಕಾಣಿಸಿ ಕೊಂಡು ಅವನಿಗೆ ಸ್ನಾನಮಾಡಿಸಿದಳು. ಅಗ್ನಿಯಂತೆ ಮಗು ಪ್ರಕಾಶ ಮಾನವಾಗಿತ್ತು. ಅವನ ಮುಂದೆ ದಂಡ ಕೃಷ್ಣಾಜಿನಗಳು ಆಕಾಶದಿಂದ ಬಿದ್ದುವು. ಗಂಧರ್ವರು ಗಾನಮಾಡಿದರು. ಇಂದ್ರಾದಿ ಲೋಕಪಾಲಕರು ಮಗುವನ್ನು ಹರಸಿದರು. ಪಾರ್ವತೀ ಪರಮೇಶ್ವರರು ಬಂದು ಶುಕನಿಗೆ

ಉಪನಯನಾದಿ ಸಂಸ್ಕಾರ ನಡೆಸಿದರು. ಇಂದ್ರನು ಅವನಿಗೆ ದಿವ್ಯ ಕಮಂಡಲು, ದಿವ್ಯವಸ್ತ್ರವನ್ನು ಕೊಟ್ಟನು. ವ್ಯಾಸನಂತೆ, ಶುಕನಿಗೂ ಹುಟ್ಟಿದ ಕೂಡಲೇ ವೇದ, ವೇದಾಂಗ, ಇತಿಹಾಸ, ಪುರಾಣ, ಸೂತ್ರಾದಿ ಶಾಸ್ತ್ರಗಳೆಲ್ಲ ಅವನನ್ನು ಸೇರಿದುವು. ಸಂಪ್ರದಾಯಿಕವಾಗಿ, ಬೃಹಸ್ಪತಿಯ ಗುರೂಪದೇಶದಿಂದ, ಶುಕನು ಎಲ್ಲವನ್ನೂ ಅಧ್ಯಯನ ಮಾಡಿದನು. ಹೀಗೆ ವಿದ್ಯಾಪಾರಂಗತನಾದ ಶುಕನು ತಂದೆಯ ಬಳಿ ಬಂದು ಹೀಗೆ ಪ್ರಾರ್ಥಿಸುತ್ತಾನೆ.

ತಂದೆಯೇ ! ನೀನು ಮಹಾತ್ಮನು. ಮೋಕ್ಷಧರ್ಮ ತಿಳಿದವನು. ನನ್ನ ಮನಸ್ಸಿಗೆ ಶಾಂತಿಯುಂಟಾಗುವ ಹಾಗೆ ಮೋಕ್ಷತನವನ್ನು ಉಪದೇಶ ಮಾಡಬೇಕೆಂದು ಬೇಡುವೆನು. ಆದರೆ, ಮೋಕ್ಷವಿಚಾರವನ್ನು ಚೆನ್ನಾಗಿ ತಿಳಿದಿರುವ ಜನಕರಾಜನ ಬಳಿ ಹೋಗಿ ತಿಳಿಯುವಂತೆ ಶುಕನಿಗೆ ವ್ಯಾಸನು ತಿಳಿಸುವನು. ಜನಕ ಚಕ್ರವರ್ತಿಯು ಮಹಾತ್ಮನು. ಮಹಾ ಪಂಡಿತನು. ಮೋಕ್ಷಶಾಸ್ತ್ರ ಕುಶಲನು. ಮಹಾ ಧರ್ಮಿಷ್ಠನು. ಗುರುವಿನ ಬಳಿ ಹೋಗುವಾಗ ವಿನಯ, ವಿಧೇಯತೆ ಇರಬೇಕೆಂದು ವ್ಯಾಸನು ಸೂಚಿಸುವನು. ಶುಕನು ಹಾಗೆಯೇ ಮಾಡಿ, ಮೋಕ್ಷಶಾಸ್ತ್ರದ ತಿರುಳನ್ನು ಜನಕನಿಂದಲೂ, ನಾರದನಿಂದಲೂ ತಿಳಿದನು. ಅನಂತರ ಸೂರ್ಯನ ಕಡೆ ಮುಖ ಮಾಡಿ, ನೀಡಿದ ಕೈ, ಪಾದಗಳೊಡನೆ ಆಕಾಶಕ್ಕೆ ಹಾರಿದನು. ಪರಬ್ರಹ್ಮವನ್ನು ಪ್ರವೇಶಮಾಡಿದನು.

ವ್ಯಾಸನು, ಮಗ ಮಾಯವಾದುದನ್ನು ಕಂಡು ವ್ಯಾಕುಲನಾಗಿ, ಮಂದಾಕಿನೀ ತೀರದಲ್ಲಿ ಕುಳಿತುಬಿಟ್ಟನು. ಆಗ ಮಹಾರುದ್ರನು ಅಲ್ಲಿಗೆ ಬಂದು, 'ಮಹರ್ಷೀ ! ಪಂಚಭೂತಕ್ಕೆ ಸಮಾನ ವೀರ್ಯವುಳ್ಳ ಪುತ್ರನು ಬೇಕೆಂದು ಪ್ರಾರ್ಥಿಸಿದೆ. ನಿನ್ನ ತಪಸ್ಸಿಗೂ, ಮಹಿಮೆಗೂ, ಭಕ್ತಿಗೂ ತಕ್ಕ ಮಗನೇ ಹುಟ್ಟಿದನು. ಅವನು ಅತ್ಯಂತ ಶುದ್ಧನು. ಮಹಾ ಮಹಿಮನು. ನಿನ್ನ ಮಗನ ಛಾಯೆಯು ಯಾವಾಗಲೂ ನಿನ್ನನ್ನು ಅನುವರ್ತಿಸುವಂತೆ ಅನುಗ್ರಹ ಮಾಡುವೆನು. ಚಿಂತೆಯನ್ನು ಬಿಡು' ಎಂದು ಹೇಳಿ ರುದ್ರನು ಮಾಯವಾದನು. ವ್ಯಾಸನು ಸಮಾಧಾನ ಪಡೆದು ಆಶ್ರಮವನ್ನು ಸೇರಿದನು.

ಹೀಗಿರುವಲ್ಲಿ, ಒಂದು ದಿನ ವ್ಯಾಸ ಮಹರ್ಷಿಯು, ಮಹಾಭಾರತ ಸೃಷ್ಟಿಗಾಗಿ ಯೋಚಿಸುತ್ತಾ ಕುಳಿತು ಬ್ರಹ್ಮನನ್ನು ಪ್ರಾರ್ಥಿಸಿದನು. ಮಹರ್ಷಿಯ ಮನೋಭಾವವನ್ನು ತಿಳಿದು ಬ್ರಹ್ಮನು ಅದ್ಭುತ ಪಂಡಿತನಾದ ಮಹಾಗಣಪತಿಯನ್ನು ವ್ಯಾಸನ ಬಳಿಗೆ ಕಳುಹಿಸಿದನು. ಮಹಾಭಾರತದ ಸೃಷ್ಟಿಗಾಗಿ ವ್ಯಾಸರಿಗೂ, ಗಣಪತಿಗೂ ಒಂದು ಕರಾರಾಯಿತು. ತಾನು ಬರೆಯುತ್ತಿರುವಾಗ ತನ್ನ ಲೇಖಣಿಗೆ ವಿರಾಮ ದೊರೆಯದಂತೆ, ಶ್ಲೋಕಗಳು ಹೇಳಲ್ಪಡುತ್ತಿರಬೇಕೆಂದೂ, ಹಾಗೇನಾದರೂ ವಿರಾಮ ದೊರೆತರೆ, ತಾನು ಲೇಖಣಿಯನ್ನು ಕೆಳಗಿಟ್ಟು ಹೊರಟುಹೋಗುವಂತೆಯೂ ಗಣಪತಿ ಸವಾಲು ಹಾಕಿದನು. ಇದಕ್ಕೆ ಒಪ್ಪಿಕೊಂಡು, ವ್ಯಾಸನೂ ಪ್ರತಿಸವಾಲಿಟ್ಟನು. ಅದೇನೆಂದರೆ, ತಾನು ಹೇಳುವ ಶ್ಲೋಕದ ಪ್ರತಿಪದದ ಅರ್ಥವನ್ನು ತಿಳಿದುಕೊಂಡೇ ಗಣಪತಿಯು ಬರೆಯಬೇಕೆಂಬುದು. ಇದಕ್ಕೆ ಗಣಪತಿಯೂ ಒಪ್ಪಿದನು. ಈ ಕರಾರಿನಂತೆಯೇ, ಮಹಾಭಾರತ ಕಾವ್ಯ ಸೃಷ್ಟಿಯಾಯಿತು. ಎಲ್ಲಿ ಗಣಪತಿಯ ಲೇಖಣಿಗೆ ವಿರಾಮ ದೊರೆಯಬಹುದೆಂಬ ಸಂದೇಹ ವ್ಯಾಸರಿಗುಂಟಾಗುತ್ತದೋ ಅಲ್ಲಿ ವ್ಯಾಸರು ಒಂದೆರಡು ಕಠಿಣ ಶ್ಲೋಕಗಳನ್ನು ಹೇಳಿದ್ದಾರೆ. ಅದನ್ನು ಅರ್ಥಮಾಡಿಕೊಳ್ಳಲು ಗಣಪತಿಗೆ ಸ್ವಲ್ಪಕಾಲ ಬೇಕಾಗುವುದು. ಅಷ್ಟರಲ್ಲಿ ವ್ಯಾಸರು ತಮ್ಮ ಶ್ಲೋಕಗಳನ್ನು ಮುಂದುವರಿಸುತ್ತಿದ್ದರು ಎಂದು ಪ್ರತೀತಿ. ಇಂತಹ ಕಠಿಣ ಶ್ಲೋಕಗಳನ್ನು, ವ್ಯಾಸಗುಟ್ಟು ಎಂದು ಕರೆಯಲಾಗಿದೆ.

ವ್ಯಾಸರು ಬರೆದಿರುವ ಮಹಾಭಾರತವು ಬಹು ದೊಡ್ಡ ಗ್ರಂಥ. ಅದೊಂದು ದೊಡ್ಡ ವ್ಯಾಪಕಶಾಸ್ತ್ರ. ಅದರಲ್ಲಿ ಅರ್ಧಭಾಗದಷ್ಟು ಬರೀ ನೀತಿ; ಉಳಿದರ್ಧ ಕಥೆ; ಉಪಕಥೆ; ಮಹಾಕಾವ್ಯದಲ್ಲಿರಬೇಕಾದ ಗುಣಗಳೂ, ಲಕ್ಷಣಗಳೂ ಇದರಲ್ಲಿವೆ. ಜೀವನದ ವಿಮರ್ಶೆ, ಭಾವ ಸಂಪತ್ತು, ಪಾತ್ರರಚನೆ, ವಸ್ತುಚಮತ್ಕಾರ, ರಸಗಳ ಝುರಿ, ಕವಿಯ ನೈಪುಣ್ಯ—ಎಲ್ಲ ತುಂಬಿವೆ. ವ್ಯಾಸರನ್ನು ಕವಿಬ್ರಹ್ಮ ಎಂದು ಬಾಣನು ಹೊಗಳಿದ್ದಾನೆ. ಮಹಾಭಾರತವು ಕಥೆಗಳ ಗಣಿ. ಇದರಲ್ಲಿ ಇಲ್ಲದ ಕಥೆಗಳಿಲ್ಲ. ದೇವತೆಗಳ ಕಥೆ, ರಾಕ್ಷಸರ ಕಥೆ, ವೀರರ ಕಥೆ, ಪುಣ್ಯ ಕಥೆ, ನೀತಿ ಕಥೆ, ತ್ಯಾಗಿಗಳ ಕಥೆ, ಯೋಗಿಗಳ ಕಥೆ, ಉಗ್ರ

ರೂಪಿಗಳ ಕಥೆ, ಹಾವು, ಮೃಗ, ಪಕ್ಷಿಗಳ ಕಥೆ. ಎಲ್ಲ ಇವೆ. ಇವೆಲ್ಲ ಜನಪ್ರಿಯವಾಗಿವೆ.

ಮಹಾಭಾರತವು ಒಂದು ಯುದ್ಧದ ಕಥೆ. ದುಃಖವೇ ಅದರ ಹಿನ್ನೆಲೆ. ಮನುಷ್ಯರ ಮನಸ್ಸನ್ನು ಉಲ್ಲಾಸದಿಂದ ಉಬ್ಬಿಸುವ ಕಾವ್ಯ ಇದಲ್ಲ. ಇದರಲ್ಲಿ ಕಷ್ಟ, ಸಂಕಟಗಳೇ ಹೆಚ್ಚು. ಪಾಂಡವರ ಕಷ್ಟ, ಕಾರ್ಪಣ್ಯ, ದುರ್ಯೋಧನ, ಕರ್ಣ, ಶಕುನಿಗಳ ತೋರಿಕೆಯ ಅಟ್ಟಹಾಸ ವನ್ನು ಇಲ್ಲಿ ಕಾಣಬಹುದು. ಕೊನೆಗೆ ಕೌರವ ಪಾಂಡವರ ನಾಶ. ಪಾಂಡವರು ಯುದ್ಧದಲ್ಲಿ ಗೆದ್ದರು. ಆದರೆ ಏನು ತಾನೆ ಸುಖಪಟ್ಟರು? ಇಷ್ಟೆಲ್ಲಾ ಅನಾಹುತಕ್ಕೆ ಕಾರಣನಾದ ದುರ್ಯೋಧನನಿಗೆ ಏನು ತಾನೆ ಶಿಕ್ಷೆ ಆಯಿತು ?

ವ್ಯಾಸರ ಮಹಾಭಾರತದಲ್ಲಿ ಸಾರವಾದ ಭಾಗ ಭಗವದ್ಗೀತೆ. ಇದರಲ್ಲಿ ಏಳುನೂರು ಶ್ಲೋಕಗಳಿವೆ. ಕೃಷ್ಣನಿಗೂ ಅರ್ಜುನನಿಗೂ ನಡೆದ ಸಂಭಾಷಣೆ ಇದು. ಇದರಲ್ಲಿ ಕೃಷ್ಣಧರ್ಮ ತುಂಬಿದೆ. ಜಗತ್ತಿನ ಶಾಂತಿಗೆ ಈ ಧರ್ಮ ಮುಖ್ಯ ಅವಲಂಬನ. ಮಹಾಭಾರತದಲ್ಲಿ ಬರುವ ಉದಾತ್ತ ವ್ಯಕ್ತಿಗಳು ಈ ಧರ್ಮವನ್ನು ಪ್ರತಿಪಾದಿಸಿದ್ದಾರೆ. ಶ್ರೀಕೃಷ್ಣನು, ಗೀತೆಯಲ್ಲಿ ಹೇಳಿರುವುದನ್ನೆಲ್ಲಾ ಆಚರಿಸಿ ತೋರಿಸಿದ್ದಾನೆ. ಶ್ರೀಕೃಷ್ಣನ ಮಹಿಮೆ ಭಾರತದ ತುಂಬ ಇದೆ. ಅವನು ಪರಮಾತ್ಮನ ಅವತಾರವೆಂದು ಭೀಷ್ಮನು ಹೇಳುತ್ತಾನೆ. ಕೃಷ್ಣನ ಮಹಿಮೆಯನ್ನು ಇಲ್ಲಿ ಓದಿ, ಕೇಳಿ, ತೃಪ್ತಿಯಾಗದಿದ್ದರೆ, ಅದನ್ನು ಭಾಗವತದಲ್ಲಿ ಓದಿ ತಿಳಿಯಬಹುದು. ಮಹಾಭಾರತದಲ್ಲಿ ಇಲ್ಲದ ವಿಷಯಗಳಿಲ್ಲ. ರಾಮಾಯಣ, ಭಾಗವತ, ಹರಿವಂಶ ಇತರ ಪುರಾಣ ಕಥೆಗಳೆಲ್ಲ ಇದರಲ್ಲಿ ಬರುತ್ತವೆ. ಇಂತಹ ಪೂಜ್ಯನಾದ ಮತ್ತು ಸರ್ವೋತ್ತಮ ಕಾವ್ಯವನ್ನು ಬರೆದವರು ವ್ಯಾಸರು.

ಮಹಾಭಾರತದ ಯುದ್ಧ ಪ್ರಾರಂಭವಾಗುವುದಕ್ಕೆ ಮುಂಚೆ ವ್ಯಾಸನು, ಹುಟ್ಟು ಕುರುಡನಾದ ಧೃತರಾಷ್ಟ್ರನ ಬಳಿಗೆ ಬರುವನು. 'ರಾಜಾ ! ನಿನ್ನ ಮಕ್ಕಳು ಅವಿಧೇಯರಾದರು. ಯಾರ ಮಾತನ್ನೂ ಅವರು ಕೇಳುವುದಿಲ್ಲ. ಮೂರ್ಖರು. ಇತರ ರಾಜರೊಡನೆ ಯುದ್ಧ ಮಾಡಲು ಮೃತ್ಯುಮುಖದಲ್ಲಿ ನಿಂತಿದ್ದಾರೆ. ನಿನಗೆ ಯುದ್ಧ ನೋಡ

ಬೇಕೆಂಬ ಆಸೆ ಇದ್ದರೆ ಹೇಳು. ಕಣ್ಣು ಬರುವಂತೆ ವರ ಕೊಡುವೆನು. ನಿನ್ನ ಮಕ್ಕಳೂ, ಇತರರೂ ಕಾಲ ಪ್ರೇರಿತರಾಗಿ ಸಾಯುವುದನ್ನು ನೀನು ಕಣ್ಣಾರೆ ನೋಡಬಹುದು' ಎಂದನು.

ಆಗ ಧೃತರಾಷ್ಟ್ರನು, ದಾಯಾದಿಗಳು ಒಬ್ಬರೊಡನೊಬ್ಬರು ಕಾದಾಡಿ, ಹೊಡೆದಾಡಿ ಸಾಯುವುದನ್ನು ತಾನು ಕಣ್ಣಾರೆ ನೋಡಲಾರೆನೆಂದೂ, ಆದರೆ ಅಲ್ಲಿ ನಡೆಯುವ ಪ್ರತಿಯೊಂದು ಸಂಗತಿಯನ್ನೂ ತಾನು ಕಿವಿಯಾರೆ ಕೇಳುವಂತಾದರೆ ಸಾಕೆಂದೂ ತಿಳಿಸುವನು. ಆಗ ವ್ಯಾಸನು 'ಕೌರವರಾಜಾ! ಕೌರವ ಪಾಂಡವರ ಕಥೆ ಜಗತ್ತಿನಲ್ಲಿ ಶಾಶ್ವತವಾಗಿ ನಿಲ್ಲುವಂತೆ ಬರೆಯುತ್ತೇನೆ. ಯುದ್ಧ ಭೂಮಿಯಲ್ಲಿ ನಡೆಯುವುದನ್ನೆಲ್ಲಾ ವಿವರಿಸುವೆನು. ಈ ಪ್ರತಿಯೊಂದು ಸಂಗತಿಯನ್ನೂ ಸಂಜಯನು ನಿನಗೆ ವಿವರಿಸುವನು. ಅವನು ಎಲ್ಲಿದ್ದರೆ ಅಲ್ಲಿಯೇ ಆ ವಿಷಯವೆಲ್ಲಾ ಅವನಿಗೆ ಗೋಚರವಾಗುವ ಹಾಗೆ ವರ ಕೊಡುವೆನು. ಈ ವಿಷಯಗಳು ಎಷ್ಟೇ ರಹಸ್ಯವಾಗಿದ್ದರೂ, ಪ್ರಕಾಶವಾಗಿದ್ದರೂ ಹಗಲು ನಡೆದರೂ, ರಾತ್ರಿ ನಡೆದರೂ, ಎಲ್ಲವೂ ಸಂಜಯನಿಗೆ ಗೋಚರವಾಗುವುದು. ಸೈನಿಕರ, ವೀರರ, ಮಹಾರಥಿಕರ ಮನೋಗತವೂ ಕೂಡ ಸಂಜಯನಿಗೆ ಹೊಳೆಯುವುದು. ಅವನ್ನೆಲ್ಲಾ ವಿಶದವಾಗಿ ಅವನು ನಿನಗೆ ತಿಳಿಸುವನು' ಎಂದನು.

'ಧೃತರಾಷ್ಟ್ರ! ಈ ಮಹಾ ಯುದ್ಧದಲ್ಲಿ ಮಹಾಕ್ಷಯವುಂಟಾಗುವುದೇನೋ ನಿಜ. ಈಗಾಗಲೇ ಅಂತಹ ಭಯಂಕರ ದುರ್ನಿಮಿತ್ತಗಳು ಕಾಣಿಸುತ್ತಿವೆ. ಮಾಂಸಾಹಾರಿ ಪಕ್ಷಿಗಳು ಕೌರವರ ರಥದ ಧ್ವಜದ ಮೇಲೆ ಗುಂಪುಕೂಡಿ ಬೀಳುತ್ತಿವೆ. ರಣಹದ್ದುಗಳು ದಕ್ಷಿಣಾಭಿಮುಖವಾಗಿ ಹಗಲಲ್ಲಿ ಸುತ್ತುತ್ತಿವೆ. ರಾತ್ರಿ ಹಗಲೆಂಬ ಕಾಲನಿಯಮವಿಲ್ಲದೆ ಸೂರ್ಯ ಚಂದ್ರರು ಕಾಣಿಸುತ್ತಿರುವರು. ದೇವರ ಪ್ರತಿಮೆಗಳು ನಡುಗುತ್ತಿರುವುವು. ಇಂಪಾಗಿ ಕೂಗಬೇಕಾದ ಗಿಳಿ, ಕೋಗಿಲೆ, ಹಂಸ ಮಯೂರಾದಿ ಪಕ್ಷಿಗಳು ಭಯಂಕರವಾಗಿ ಕೂಗುತ್ತಿರುವುವು. ಮೇಘವು ಧೂಳನ್ನೂ ಮಾಂಸವನ್ನೂ ಕರೆಯುತ್ತಿರುವುದು. ಇವೆಲ್ಲ ಮುಂದೆ ಬರುವ ಭಯಂಕರ ಹೆದರಿಕೆಯನ್ನು ಸೂಚಿಸುತ್ತಿರುವುವು!' ಎಂದು ವ್ಯಾಸನು ಹೇಳಿದನು.

ಆಗ ಧೃತರಾಷ್ಟ್ರನು, ಅವೆಲ್ಲ ದೈವಸಂಕಲ್ಪವೆಂದೂ, ಕ್ಷತ್ರಿಯರು ಯುದ್ಧದಲ್ಲಿ ಸತ್ತರೆ ವೀರಸ್ವರ್ಗ ಹೊಂದಿ ಸುಖವಾಗಿರುವರೆಂದೂ, ಅಂತಹವರಿಗೆ ಇಹದಲ್ಲಿ ಕೀರ್ತಿ, ಪರದಲ್ಲಿ ಸೌಖ್ಯ ಎಂದು ಹೇಳು ವನು.

'ಧೃತರಾಷ್ಟ್ರ! ನೀನು ಹೇಳುವುದು ನಿಜ. ಲೋಕದಲ್ಲಿ ಯಾವುದೂ ಶಾಶ್ವತವಾಗಿರುವುದಿಲ್ಲ. ಕಾಲವು ಜಗತ್ತನ್ನು ಸಂಹರಿಸುವುದು. ಆದರೆ ನಿನ್ನ ವಂಶದ ಕುರುಗಳಿಗೆ ಮುಂದೆ ಬರುವ ವಿಪತ್ತನ್ನು ನೀನು ತಪ್ಪಿಸ ಬಹುದು. ಒಡಹುಟ್ಟಿದವರನ್ನು ಕೊಲ್ಲುವುದು ಬಹಳ ಹೀನವಾದುದು. ಕೊಲೆಯನ್ನು ಯಾರು ಆದರಿಸಿಯಾರು? ಅದು ಯಾರಿಗೂ ಹಿತವಾಗಿರು ವುದಿಲ್ಲ. ಯಾರು ಕುಲಧರ್ಮವನ್ನು ಕೆಡಿಸುವರೋ, ಅವರು ಆತ್ಮ ಘಾತುಕರು. ನೀನು ನಿನ್ನ ಮಕ್ಕಳಿಗೆ ಧರ್ಮವನ್ನು ತಿಳಿಸು. ಇದರಿಂದ ನಿನಗೆ ಕೀರ್ತಿಬರುವುದು. ಧರ್ಮಿಷ್ಠನೆಂಬ ಹೆಸರು ಬರುವುದು. ಪಾಂಡವರು ತಮ್ಮ ರಾಜ್ಯ ಪಡೆಯುವಂತೆ ಮಾಡು. ಶಾಂತಿಯಿಂದಿರು ವಂತೆ ನಿನ್ನ ಮಕ್ಕಳಿಗೆ ತಿಳಿಸು' ಎಂಬುದಾಗಿ ವ್ಯಾಸನು ಧೃತರಾಷ್ಟ್ರನಿಗೆ ತಿಳಿಸಿ ಮಾಯವಾದನು.

ಪುನಃ ಇನ್ನೊಂದು ಸಲ ವ್ಯಾಸನು ಧೃತರಾಷ್ಟ್ರನನ್ನು ಕಂಡು ಎಚ್ಚರಿಸುವನು. 'ಕುರುರಾಜಾ! ಹದಿಮೂರು ವರ್ಷಕಾಲ ಪಾಂಡವರು ವನವಾಸ ಮಾಡಬೇಕೆಂದು ನಿನ್ನ ಮಗನು ಹೇಳಿದನು. ಪಾಂಡವರು ಒಪ್ಪಿಸಿಕೊಂಡರು. ದುಷ್ಟನಾದ ನಿನ್ನ ಮಗನು ಇಷ್ಟರಿಂದ ತೃಪ್ತನಾಗಲಿಲ್ಲ. ಕಾಡಿನಲ್ಲಿರುವಾಗ ಪಾಂಡವರನ್ನು ಕೊಲ್ಲಿಸಬೇಕೆಂದು, ನಿನ್ನ ಮಗ ಸಂಚು ಮಾಡುತ್ತಿರುವನು. ಈ ಪ್ರಯತ್ನವನ್ನು ನೀನು ತಡೆಗಟ್ಟದಿದ್ದರೆ, ನಿನ್ನ ಮಕ್ಕಳು ಸಾಯುವುದನ್ನು ನೀನು ನೋಡಬೇಕಾಗುವುದು ನಾನು, ವಿದುರ, ಭೀಷ್ಮ, ದ್ರೋಣ, ಕೃಪ ಹೇಳುವುದೆಲ್ಲ ನಿನ್ನ ಕ್ಷೇಮಕ್ಕೆ. ನಿನ್ನ ಮಕ್ಕಳ ಸೌಖ್ಯಕ್ಕೆ. ನಿನ್ನ ಮಗನ ದುರ್ಬುದ್ಧಿಯನ್ನು ನೀನು ತಡೆಯಬೇಕೇ ವಿನಹ ಇನ್ನೊಬ್ಬರಿಂದ ಸಾಧ್ಯವಿಲ್ಲ. ಮನುಷ್ಯನಿಗೆ ಯಾವುದು ಹುಟ್ಟುಗುಣವೋ, ಅದು ಅವನನ್ನು ಚಿತೆಯಲ್ಲಿಡುವವರೆಗೆ ಬಿಡುವುದಿಲ್ಲ.'

'ಕುರುರಾಜ ! ಪುತ್ರನಿಗಿಂತ ಪ್ರಿಯವಾದುದು ಇನ್ನೊಂದಿಲ್ಲ ನಿಜ. ಆದರೆ ಈ ವ್ಯಾಮೋಹದಿಂದ, ಧರ್ಮಕ್ಕೆ ಲೋಪ ಬರಬಾರದು. ಇನ್ನೊಬ್ಬರಿಗೆ ತೊಂದರೆ ಬರಬಾರದು. ಹಿಂದೆ ಒಂದು ಸಲ ಕಾಮಧೇನುವಿಗೂ, ಇಂದ್ರನಿಗೂ ನಡೆದ ಸಂವಾದವನ್ನು ಹೇಳುವೆನು ಕೇಳು. ಒಂದಾನೊಂದು ದಿನ ಗೋವುಗಳಿಗೆಲ್ಲಾ ತಾಯಿಯಾದ ಕಾಮಧೇನುವು, ಸ್ವರ್ಗದಲ್ಲಿ ಅಳುವುದಕ್ಕೆ ಪ್ರಾರಂಭಿಸಿತು. ಇಂದ್ರನು ಇದನ್ನು ಕಂಡನು. ಅದರ ಸಂಕಟಕ್ಕೆ ಕಾರಣವನ್ನು ಕೇಳಿದನು. ಆಗ ಧೇನುವು ಹೀಗೆ ಹೇಳಿತು.

'ದೇವರಾಜಾ ! ಅಗೋ ನೋಡು. ಭೂಲೋಕದಲ್ಲಿ ನನ್ನ ಮಕ್ಕಳು ಎಷ್ಟು ಕಷ್ಟಪಡುತ್ತಿರುವರು. ಎಂತಹ ಕಠಿಣ ಹಿಂಸೆಯನ್ನನುಭವಿಸುತ್ತಿರುವರು. ಮನುಷ್ಯರು ನನ್ನ ಮಕ್ಕಳನ್ನು ಚಾಟಿಯಿಂದ ಹೊಡೆಯುತ್ತಿರುವರು. ಹಗ್ಗದಿಂದ ಬಿಗಿದು ಎಳೆಯುತ್ತಿರುವರು. ಅವರ ಮೇಲೆ ಹೊರಲಾರದಷ್ಟು ಹೊರೆಯನ್ನು ಹೊರಿಸುತ್ತಿರುವರು. ಅವರಿಗೆ ಸರಿಯಾಗಿ ಹೊಟ್ಟೆಗೂ ಹಾಕದೆ, ನೀರು ಕುಡಿಸದೆ ಕಷ್ಟಪಡಿಸುತ್ತಿರುವರು. ಅನೇಕ ಮಕ್ಕಳು ಭಾರವನ್ನು ಎಳೆಯಲಾರದೆ ಮುಗ್ಗರಿಸಿ ಬೀಳುತ್ತಿರುವರು. ಬಡಕಲಾಗಿದ್ದರೂ ಬಿಡದೆ ಅವರನ್ನು ಕಪಿಲೆಗೂ, ಗಾಣಕ್ಕೂ, ಗಾಡಿಗೂ, ಏರಿಗೂ ಕಟ್ಟಿ ಬಡಿದು ಓಡಿಸುವರು. ಆ ಮಕ್ಕಳ ಕಷ್ಟವನ್ನು ನಾನು ನೋಡಿ ಹೇಗೆ ಸಹಿಸಲಿ. ಈ ಮಹಾದುಃಖವು ನನ್ನನ್ನು ದಹಿಸುತ್ತಿರುವುದು. ಪುತ್ರವಾತ್ಸಲ್ಯ ನನ್ನನ್ನು ತತ್ತರಿಸುವಂತೆ ಮಾಡುತ್ತಿದೆ' ಎಂದಿತು.

ಆಗ ಇಂದ್ರನು ಆಶ್ಚರ್ಯಪಟ್ಟು 'ಕೋಮಲಾಂಗೀ ! ಪ್ರಾಣಕ್ಕಿಂತ ಪುತ್ರನು ಮೇಲು, ನಿಜ. ನಿನ್ನ ಸಂತೋಷಕ್ಕಾಗಿ, ಕೃಷಿಕರ ಸೌಕರ್ಯಕ್ಕಾಗಿ, ನಿನ್ನ ಮಕ್ಕಳ ಕ್ಷೇಮಕ್ಕಾಗಿ, ಮಳೆಯನ್ನು ಕರೆಯುವೆನು. ಇದರಿಂದ, ಭೂಮಿಯಲ್ಲಿ ನೀರು, ಮೇವು ಸಮೃದ್ಧವಾಗುವುದು. ನಿನ್ನ ಮಕ್ಕಳು ಹಸುರು ಹುಲ್ಲು ಮೇದು, ನೀರು ಕುಡಿದು ಸುಖವಾಗಿರಬಹುದು' ಎಂದನು.

ವ್ಯಾಸನು ಹೀಗೆ ಅನೇಕ ಧರ್ಮ ರಹಸ್ಯಗಳನ್ನೂ, ನೀತಿ ನಿಯಮಗಳನ್ನೂ ತಿಳಿಸಿ ಮಹೋಪಕಾರಮಾಡಿದ್ದಾನೆ. ಧರ್ಮ ಎಂದರೆ ಧರಿಸಿರು

ವುದು, ಎತ್ತಿ ನಿಲ್ಲಿಸಿರುವುದು, ಅಥವಾ ನಾಶವಾಗದಂತೆ ಹಿಡಿದಿರುವುದು. ಜಗತ್ತಿನ ಸುಖಶಾಂತಿಗಳಿಗೆ ಧರ್ಮ ಮುಖ್ಯ ಅವಲಂಬನ. ಇದನ್ನು ವ್ಯಾಸನು ಎತ್ತಿ ತೋರಿಸಿದ್ದಾನೆ. ಅನೇಕ ಉದಾತ್ತ ವ್ಯಕ್ತಿಗಳನ್ನು ನಮ್ಮ ಮುಂದಿಟ್ಟು, ಅವರ ನಡೆನುಡಿಗಳಿಂದ ಈ ಗುಣಗಳನ್ನು ಪ್ರತಿಪಾದಿಸಿದ್ದಾನೆ. ಭೀಷ್ಮನ ನಡತೆ ಎಷ್ಟು ಧೀರವಾದದ್ದು. ತ್ಯಾಗರೀತಿಯದು ನೋಡಿ. ಭೀಷ್ಮನು ಸರ್ವತ್ಯಾಗ ಮಾಡಿ, ಸರ್ವಕಾಲದ ಗೌರವ ಸಂಪಾದಿಸಿದ್ದಾನೆ. ಮಗನಿಲ್ಲದಿದ್ದರೆ ಸದ್ಗತಿ ದೊರೆಯುವುದಿಲ್ಲ. ಹೇಗಾದರೂ ಹೆಂಡತಿ ಮಕ್ಕಳನ್ನು ಪಡೆಯಲಿ ಎಂದು ಪಾಂಡುರಾಜನು ಹೇಳಿದ್ದಕ್ಕೆ, ಭೀಷ್ಮನು ತಾನು ಧರ್ಮ ಮಾರ್ಗದಲ್ಲಿದ್ದರೆ ಅದರಿಂದ ಸದ್ಗತಿ ಖಂಡಿತ ದೊರೆಯುವುದು. ಮಗನು ಗಳಿಸಿಕೊಡುವ ಗತಿಗಿಂತ, ಉತ್ತಮಗತಿಯನ್ನು ತನ್ನ ಶೀಲ, ಭಕ್ತಿ, ನೀತಿ ನಿಯಮದಿಂದ ಗಳಿಸಬಹುದು ಎಂದು ತೋರಿಸಿದ ಗಂಡಾಳು ಭೀಷ್ಮ. ಭಾರತದಲ್ಲಿ ಅರ್ಧ ಭಾಗ ಅವನದು. ಅವನು ಎಲ್ಲರಿಗೂ ಅಜ್ಜ. ಎಲ್ಲ ಧರ್ಮ ಮಾರ್ಗಕ್ಕೂ ಅಜ್ಜ.

ಸಂಸಾರ ಜೀವನ ಹಸನಾಗಬೇಕಾದರೆ, ಅದರಲ್ಲಿರುವ ವ್ಯಕ್ತಿಗಳ ಶೀಲ, ತ್ಯಾಗ, ಕ್ಷಮೆ ಇವು ಮುಖ್ಯ. ಸಂಸಾರದಲ್ಲಿರುವವರ ಪ್ರೀತಿ, ಪ್ರೇಮ, ಭಕ್ತಿ, ಗೌರವ, ನೀತಿ—ಮುಂತಾದ ಗುಣಗಳು ಹೆಚ್ಚಿದರೆ, ಉತ್ತಮಗೊಂಡರೆ ಸಂಸಾರ ಉತ್ತಮವಾಗುತ್ತದೆ. ಹೀಗೆ ವ್ಯಕ್ತಿಗಳು ಉತ್ತಮಗೊಂಡರೆ ಸಂಸಾರವೂ ಉತ್ತಮವಾಗುವುದು. ಹತ್ತು ಉತ್ತಮ ಸಂಸಾರಗಳಿಂದ ಒಂದು ಉತ್ತಮ ಸಮಾಜವಾಗುವುದು. ಸಮಾಜವಿದ್ದರಲ್ಲವೇ ದೇಶ, ರಾಷ್ಟ್ರ ಎಲ್ಲವೂ ? ಒಟ್ಟಿನಲ್ಲಿ ಜನರ ಸಂಪತ್ತು ದೇಶದ ಸಂಪತ್ತು. ಜನರು ಒಳ್ಳೆಯವರಾದರೆ ದೇಶವೂ ಒಳ್ಳೆಯದಾಗುವುದು. ಸಂಪದ್ಯುಕ್ತವಾಗುವುದು. ಇದು ಎಂತಹ ದೊಡ್ಡ ಗುಣ ಎಂಬುದನ್ನು ವ್ಯಾಸನು ತೋರಿಸಿಕೊಟ್ಟಿದ್ದಾನೆ.

ವ್ಯಾಸನು ಚಿತ್ರಿಸಿರುವ ಮುಖ್ಯ ಪಾತ್ರ ಶ್ರೀ ಕೃಷ್ಣ. ಅವನು ಧೀರ, ಗಂಭೀರ, ಸರಸಿ ಮತ್ತು ಆದರ್ಶ ವ್ಯಕ್ತಿ. ಜರಾಸಂಧನಿಗೆ ಹೆದರಿ ಊರುಬಿಟ್ಟು ಹೋದರೂ, ಸಮಯವನ್ನು ಕಾದು ಅವನನ್ನು ಭೀಮನಿಂದ ಕೊಲ್ಲಿಸಿದನು. ಕೃಷ್ಣನ ಮಹತ್ವವನ್ನು ಭೀಷ್ಮನು ಅರಿತಂತೆ ಇನ್ನಾರೂ

ಅರಿಯಲಿಲ್ಲ. ವಿದುರನು ಅತ್ಯಂತ ನೀತಿಪರ, ಸಾತ್ವಿಕ, ಧರ್ಮಮಾರ್ಗಿ. ಆದುದರಿಂದಲೇ ಅವನಿಗೂ ಕೃಷ್ಣನಿಗೂ ಪರಮ ವಿಶ್ವಾಸ. ತಂದೆ, ತಾಯಿ, ಗುರು ಹಿರಿಯರಲ್ಲಿ ಕೃಷ್ಣನಿಗೆ ಅಪಾರ ಭಕ್ತಿ. ಕುಂತಿಯನ್ನು ಕಂಡಾಗಲೆಲ್ಲ ನಮಸ್ಕಾರ ಮಾಡಿಯೇ ಮಾತನಾಡಿಸುತ್ತಿದ್ದ. ಧರ್ಮರಾಜನು, ಶ್ರೀ ಕೃಷ್ಣನನ್ನು ತನ್ನ ಅಣ್ಣನಂತೆ ಕಾಣುತ್ತಾನೆ. ಕುಲಕ್ಕೆ ಹಿರಿಯನೆಂದು ತಿಳಿಯುತ್ತಾನೆ. ಭೀಷ್ಮನು ಅವನನ್ನು ದೇವರೆಂದೇ ಹೇಳುತ್ತಾನೆ. ಅಂತೂ ವ್ಯಾಸನು ಚಿತ್ರಿಸಿರುವ ವ್ಯಕ್ತಿಗಳಲ್ಲಿ ಕೃಷ್ಣನು ಅತ್ಯಂತ ಪೂಜ್ಯ ವ್ಯಕ್ತಿ. ಆದುದರಿಂದಲೇ ಶ್ರೀಕೃಷ್ಣನು ಎಲ್ಲರಿಗೂ ಮಾರ್ಗದರ್ಶಕ, ಪೂಜಾರ್ಹ.

ವ್ಯಾಸನು ಚಿತ್ರಿಸಿರುವ ವಿಷಯಗಳಲ್ಲಿ ಅತಿ ಮುಖ್ಯವಾದುದು, ಯಜ್ಞ, ದಾನ, ತಪಸ್ಸು. ಯಜ್ಞ ಎಂದರೆ ಪೂಜೆ, ಜ್ಞಾನ, ಅಧ್ಯಯನ. ಎಲ್ಲಕ್ಕಿಂತ ಜ್ಞಾನಯಜ್ಞ ಶ್ರೇಷ್ಠ ; ಯಜ್ಞದಂತೆ ತಪಸ್ಸೂ ವಿಶೇಷವಾಗಿ ಬೆಳೆಯಿತು. ತಪಸ್ಸು ಎಂದರೆ ಶ್ರಮಪಡುವುದು ಅಥವಾ ಸಾಧನೆಮಾಡು ವುದು ಎಂದು ಹೇಳಬಹುದು. ವಿದುರನು ಕೈಗೊಂಡಿದ್ದ ತಪಸ್ಸಿನ ವರ್ಣನೆ ಇದೆ. ತಪಸ್ಸಿನ ಮುಖ್ಯ ತಾತ್ಪರ್ಯವಿಷ್ಟೆ. ದೇಹವನ್ನು ವಿಶೇಷವಾಗಿ ಕೊಬ್ಬಿಸಬಾರದು. ಹಾಗೆ ಮಾಡಿದರೆ ಗೊಬ್ಬರ ಹೆಚ್ಚಾದ ಬೆಳಸಿನಂತಾಗು ವುದು. ಅದರಲ್ಲಿ ಹೆಚ್ಚು ಎಳೆ ಇರುವುದೇ ವಿನಹ, ಹೂವು, ಹಣ್ಣು ಇರುವುದಿಲ್ಲ. ದೇಹವನ್ನು ಒಣಗಿಸಲೂ ಬಾರದು. ಒಣಗಿದ ಬೆಳಸಿನಲ್ಲಿ ಹೂವು ಹಣ್ಣಿನ ಅಭಾವದ ಜೊತೆಗೆ, ಎಲೆಯೂ ಇರುವುದಿಲ್ಲ. ದೇಹವು ಲಘುವಾಗಿ ಆರೋಗ್ಯದಿಂದಿರಬೇಕು. ಹೀಗಿದ್ದರೆ ಬುದ್ಧಿ ಹರಿತವಾಗು ವುದು. ಚುರುಕಾಗುವುದು. ಇದರಿಂದ ಆತ್ಮವು ಜಾಗೃತವಾಗುವುದು. ಬುದ್ಧಿ ಮದಡಾದರೆ, ಮಂಕಾದರೆ, ಚಂಚಲವಾದರೆ, ಆತ್ಮವು ಜಾಗೃತ ವಾಗುವುದಿಲ್ಲ. ಸತತ ದೇಹಶ್ರಮ ಬುದ್ಧಿಶ್ರಮವೇ ತಪಸ್ಸು. ಆಹಾರ, ವಿಹಾರ, ನಿದ್ರೆ, ವಿಶ್ರಾಂತಿ ಎಲ್ಲವೂ ಮಿತಿಯಲ್ಲಿರಬೇಕು. ತಪಸ್ಸು ಎಂದರೆ ಸುಮ್ಮನೆ ಕಣ್ಣುಮುಚ್ಚಿ ಕುಳಿತುಕೊಳ್ಳುವುದಲ್ಲ. ಸದಾ ಆಚರಣೆ ಮಾಡಿ ತೋರಿಸತಕ್ಕದ್ದು. ಇದು ಘೋರತಮವಾದದ್ದಲ್ಲ. ಸರ್ವಸಾಧನೆಗೆ ಅನುಕೂಲವಾದದ್ದು.

ವ್ಯಾಸನು, ಸಂಸಾರದ ಕಷ್ಟಸುಖಗಳನ್ನು ಭಾರತದಲ್ಲಿ ಉದಹರಿಸಿದ್ದಾನೆ. ದೇವತೆಗಳಿಗೂ ಕಷ್ಟ ತಪ್ಪಿದ್ದಲ್ಲ. ಇನ್ನು ಮನುಷ್ಯರ ಮಾತೇನು? ಇದನ್ನು ತೋರಿಸುವುದಕ್ಕಾಗಿಯೇ, ಭಾರತದಲ್ಲಿ ಶಂತನು ಚಕ್ರವರ್ತಿಯಿಂದ ಹಿಡಿದು ಶ್ರೀಕೃಷ್ಣನವರೆಗೆ ಎಲ್ಲರೂ ಕಷ್ಟ ಅನುಭವಿಸಿದ್ದಾರೆ ಎಂದು ವ್ಯಾಸನು ವರ್ಣಿಸಿದ್ದಾನೆ. ಶ್ರೀಕೃಷ್ಣ ದ್ರೌಪತಿಯಂತಹವರೂ ಕೂಡ, ಕಷ್ಟವನ್ನು ಅನುಭವಿಸಿ ಅದನ್ನು ನಿವಾರಿಸಿಕೊಳ್ಳಲು ಉಪಾಯವನ್ನು ಯೋಚಿಸಿ, ಮುಂದೆ ಅದನ್ನು ಕಳೆದು ಸುಖವನ್ನು ಅನುಭವಿಸಬಹುದೆಂಬ ಆಸೆ ಇಟ್ಟುಕೊಂಡಿದ್ದರು. ಈ ರೀತಿಯ ಕಷ್ಟಸುಖಗಳು ಸಾಮಾನ್ಯ ಸಂಸಾರದಲ್ಲಿ ಉಂಟಾಗುವ ಹವ್ಯಾಸಗಳು. ಈ ಕಷ್ಟಸುಖಗಳಿಗೆ ಕಾರಣವು ಕರ್ಮ ಎಂಬುದಾಗಿ ವ್ಯಾಸನು ಬಹು ಚೆನ್ನಾಗಿ ಉದಹರಿಸಿದ್ದಾನೆ.

ಕರ್ಮ ಎಂದರೆ ಕೆಲಸ. ಇದರಲ್ಲಿ ಸತ್ಕರ್ಮ, ದುಷ್ಕರ್ಮ ಎಂದು ಎರಡು ವಿಧ. ಸತ್ಕರ್ಮದ ಫಲ ಸ್ವರ್ಗ. ದುಷ್ಕರ್ಮದ ಫಲ ನರಕ. ಸ್ವರ್ಗ ನರಕಗಳ ಮಾತು ಹಾಗಿರಲಿ. ಇಲ್ಲಿಯೇ ನಿಜವಾಗಿ ನಾವು ಅವನ್ನು ಕಾಣಬಹುದು. ಒಳ್ಳೆಯ ಕೆಲಸಕ್ಕೆ ಒಳ್ಳೆಯ ಫಲ, ದುಷ್ಕರ್ಮಕ್ಕೆ ಕೆಟ್ಟಫಲ. ಪುಣ್ಯಪಾಪಗಳು ಅತ್ಯುತ್ಕಟವಾದರೆ, ಅವುಗಳ ಫಲ ಇಲ್ಲಿಯೇ ಕಣ್ಣೆದುರಿಗೇ ಗೋಚರವಾಗುವುದು. ಸತ್ಕರ್ಮಗಳು ಹೂವು ಗಂಧ ಇದ್ದಹಾಗೆ. ಅದರ ಪರಿಮಳ .ತನಗೂ, ಸುತ್ತಮುತ್ತ ಇರುವವರಿಗೂ ವ್ಯಾಪಿಸುವುದು. ದುಷ್ಕರ್ಮ ದುರ್ನಾತ ಇದ್ದಂತೆ. ಅದರ ಪರಿಣಾಮ ತನಗಲ್ಲದೆ, ಇತರರಿಗೂ ಉಂಟಾಗುವುದು. ಧರ್ಮಿಷ್ಠನ ಗುಣ ಸುತ್ತಮುತ್ತ ಸುಭಿಕ್ಷ ನೆಲಸುವಂತೆ ಮಾಡುತ್ತದೆ. ಪಾಪಿಯ ದೋಷದಿಂದ ಅನರ್ಥವುಂಟಾಗುವುದು. ಇದು ತನಗಲ್ಲದೆ, ತನಗೆ ಸೇರಿದವರಿಗೆಲ್ಲಾ ವ್ಯಾಪಿಸಬಹುದು. ದುರ್ಯೋಧನನ ಗತಿ ಹೀಗೆಯೇ ಆದದ್ದು. ಅವನು ನ್ಯಾಯಕ್ಕೆ ತಲೆಬಾಗಲಿಲ್ಲ. ಶಾಂತಿಗೆ ಸಮ್ಮತಿಸಲಿಲ್ಲ. ಸಂಧಿಗೆ ಒಪ್ಪಲಿಲ್ಲ. ಯುದ್ಧಕ್ಕೆ ಅವಕಾಶ ಕೊಟ್ಟನು. ಇದರಿಂದ ತಾನು ಹಾಳಾದುದಲ್ಲದೆ, ತನಗೆ ಸೇರಿದ ಲಕ್ಷಾಂತರ ಜನರನ್ನೂ ಬಲಿಕೊಟ್ಟ. ಹೀಗೆ ವ್ಯಾಸನು, ಭಾರತದಲ್ಲಿ ಧಾರ್ಮಿಕ ಮತ್ತು ರಾಜನೀತಿ ಉಪನ್ಯಾಸಗಳಿಗಿಂತ ಹೆಚ್ಚಾಗಿ, ಸಾಂಸಾರಿಕ ನೀತಿಯನ್ನು ಎತ್ತಿ ತೋರಿಸಿದ್ದಾನೆ. ಇವು ಲೋಕಪ್ರಿಯವಾಗಿವೆ. ವ್ಯಾಸನು ನಿರೂಪಿ

ಸಿರುವ ನಳೋಪಖ್ಯಾನ, ಸಾವಿತ್ರಿಯ ಉಪಾಖ್ಯಾನವಂತೂ ಲೋಕೋತ್ತರವಾಗಿವೆ.

ಇಂದಿನ ಪ್ರಪಂಚಕ್ಕೆ ಸರ್ವೋತ್ತಮವಾದ ಸಂದೇಶಗಳನ್ನು ವ್ಯಾಸನು ಮಹಾಭಾರತದ ಮೂಲಕ ಸಾರಿದ್ದಾನೆ. ಇಂದು ಜನರಿಗೆ ಕಟ್ಟುನಿಟ್ಟು ಕಟ್ಟಳೆ ನಿಯಮ ಒಂದೂ ಬೇಡವಾಗಿದೆ. ಹಣ ಸಂಪಾದನೆ ಮಾಡಬೇಕು. ಅದರಿಂದ ಎಲ್ಲವನ್ನೂ ಪಡೆಯಬಹುದು. ಸುಳ್ಳು, ಮೋಸ, ಕೃತ್ರಿಮ, ಪೈಪೋಟಿ ಮಾರ್ಗಗಳಿಂದಲಾದರೂ, ಹಣ ಗಳಿಸಬೇಕೆಂಬುದು ಕೆಲವರ ಮತ. ಬಡವರಲ್ಲಿ ಬಡತನ ಹೆಚ್ಚುತ್ತಿದೆ. ಶ್ರೀಮಂತರಲ್ಲಿ ಸಿರಿತನ ಹೆಚ್ಚುತ್ತಿದೆ. ನಿರುದ್ಯೋಗ, ಹಸಿವು, ಅತೃಪ್ತಿ, ಅಸೂಯೆ, ಅಸಮಾಧಾನ ಇವೂ ಕೂಡ ಹೆಚ್ಚುತ್ತಿವೆ. ವ್ಯಕ್ತಿಗಳಂತೆ ದೇಶಗಳೂ ಕೂಡ, ಈ ಮಾರ್ಗವನ್ನು ಅನುಸರಿಸುತ್ತಿವೆ. ವಸ್ತುಗಳ ಅವಶ್ಯಕತೆ ಇರಲಿ, ಇಲ್ಲದಿರಲಿ, ಅಂತಹವುಗಳನ್ನು ಬೃಹದಾಕಾರವಾಗಿ ಉತ್ಪತ್ತಿಮಾಡಿ, ಮಾರುತ್ತಿವೆ. ಯುದ್ಧಸಾಮಗ್ರಿಗಳನ್ನು ಮಾಡಿ ಮಾರುತ್ತಿವೆ. ಎಂದಿನವರೆಗೆ ಜಗತ್ತಿನಲ್ಲಿ ಏರುಪೇರುಗಳೂ, ಅಸಹನೆ ಅಸೂಯೆಗಳೂ ಇರುವುವೋ ಅಲ್ಲಿಯವರೆಗೆ ಶಾಂತಿ ಇರುವುದಿಲ್ಲ. ಇವೆಲ್ಲಾ ಮಾಯವಾಗಬೇಕಾದರೆ ಮಾನವನ ದೃಷ್ಟಿ ಬದಲಾಗಬೇಕು. ವ್ಯಾಪಾರ ಬುದ್ಧಿಹೋಗಿ ಧರ್ಮಬುದ್ಧಿ ಬರಬೇಕು. ಬರೀ ದಾನಮಾಡಿದರೆ ಸಾಲದು. ತ್ಯಾಗವೂ ಹೆಚ್ಚಬೇಕು. ಸುಖ ತ್ಯಾಗ ಮಾಡಿದ ಮೇಲೆಯೇ ಸುಖ ದೊರೆಯುವುದು. ಇದು ವಿಚಿತ್ರವಾಗಿ ಕಂಡರೂ ಸತ್ಯವಾಗಿದೆ.

ಆದುದರಿಂದ ಜನರು ಭೋಗಕ್ಕಿಂತ ತ್ಯಾಗಕ್ಕೆ ಹೆಚ್ಚು ಬೆಲೆ ಕೊಡಬೇಕು. ಅರ್ಥಸಂಪಾದನೆ ಭೋಗಕ್ಕಲ್ಲ ತ್ಯಾಗಕ್ಕೆ ಎಂದು ತಿಳಿಯಬೇಕು. ಸರಳಜೀವನ ನಡೆಸಿಕೊಂಡು ಬರಬೇಕು. ಸ್ವಾರ್ಥವನ್ನು ತಗ್ಗಿಸಬೇಕು. ಇದ್ದುದ್ದನ್ನು ತನ್ನವರೆಲ್ಲರೊಡನೆ ಹಂಚಿಕೊಂಡರಲ್ಲವೇ ಶಾಂತಿ ಇರುವುದು ? ತ್ಯಾಗ, ತಪಸ್ಸು ಜೀವನದ ಹವ್ಯಾಸಗಳಾಗಬೇಕು. ಇದರಿಂದ ಆತ್ಮದರ್ಶನವಾಗುವುದಲ್ಲದೆ, ಸಂಸಾರದಲ್ಲಿ ಶಾಂತಿ ನೆಲಸುವುದಕ್ಕೆ ಸಹಾಯಕವಾಗುತ್ತದೆ. ಇವೇ ಮುಂತಾದ ಉತ್ತಮೋತ್ತಮ ಸಂದೇಶಗಳನ್ನು ವ್ಯಾಸನು ಇಡೀ ಮಾನವ ಜಗತ್ತಿಗೆ ಸಾರಿದ್ದಾನೆ.

ಈ ದೃಷ್ಟಿಯಿಂದ ಕೂಡ ವ್ಯಾಸನು ಮಹಾಮಹಿಮನಾಗಿ ಕಾಣು ತ್ತಾನೆ. ಮಾನವರಿಗೆ ಸರ್ವಕಾಲದಲ್ಲಿಯೂ ಅವನು ಪೂಜಾರ್ಹನು. ಇವನು ಚಿರಂಜೀವಿ ಎಂದುದಕ್ಕೆ ಇದೇ ಅರ್ಥ. ಅವನ ನಾಮಸ್ಮರಣೆ ಮಾಡಿದರೆ ಎಷ್ಟೋ ಪುಣ್ಯ. ಅವನ ಗ್ರಂಥವನ್ನು ಓದಿದರೆ ಇನ್ನೂ ಹೆಚ್ಚಿನ ಪುಣ್ಯ. ಅದರಲ್ಲಿ ಯಾವುದಾದರೊಂದು ಭಾಗವನ್ನು ಆಚರಣೆ ಯಲ್ಲಿ ತಂದುಕೊಂಡರೆ ಅದಕ್ಕಿಂತ ಹೆಚ್ಚಿನ ಭಾಗ್ಯ ಇನ್ನೊಂದಿಲ್ಲ. ವ್ಯಾಸನು ಸನಾತನಧರ್ಮದ ಮೂಲಪುರುಷ. ಭಾರತ ಸಂಸ್ಕೃತಿಯ ಅಡಿಗಲ್ಲು. ಅವನು ನಿಜವಾಗಿ ಚಿರಂಜೀವಿ.

# ಅಶ್ವತ್ಥಾಮ

ಮಹಾಭಾರತದ ಮಹಾಪುರುಷರಲ್ಲೊಬ್ಬರಾದ ದ್ರೋಣಾಚಾರ್ಯರ ಮಗ ಅಶ್ವತ್ಥಾಮ. ಇವರು ಉಗ್ರವಾದ ತಪಸ್ಸುಮಾಡಿ, ಪರಮೇಶ್ವರನ ಕೃಪೆಯಿಂದ ಅಶ್ವತ್ಥಾಮನನ್ನು ಪಡೆದರು. ಹುಟ್ಟುವಾಗಲೇ ಮಣಿಯಿಂದ ಅಲಂಕೃತವಾದ ತಲೆ. ಅಂದವಾದ ಅವಯವ. ಶಂಖದಂತಹ ಕೊರಳು. ಕಮಲದಂತಹ ಕಣ್ಣು. ಪರಮೇಶ್ವರನ ವಾಹನವಾದ ನಂದಿಯನ್ನು ಹೋಲುವ ನಡೆ, ನುಡಿ ಎಲ್ಲವೂ ಅವನಿಗಿದ್ದುವು.

ಅಶ್ವತ್ಥಾಮನಿಗೆ ಗರುಡಸಮಾನವಾದ ದೇಹಶಕ್ತಿ ಇತ್ತು. ವಾಯುವಿನ ವೇಗಗತಿ, ಶುಕ್ರಾಚಾರ್ಯನಿಗೆ ಸಮಾನವಾದ ಬುದ್ಧಿ, ಚಂದ್ರನಿಗೆ ಸರಿಸಮವಾದ ಸೌಮ್ಯ ಇದರ ಜೊತೆಗೆ ಅವನಿಗೆ ಚಿನ್ನದಂತಹ ಮೈ, ಒತ್ತಾದ ಮೈಕೀಲು, ಅಂದವಾದ ನಡು, ದಟ್ಟವಾದ ಪಾದ, ಸುಂದರವಾದ ಬೆರಳು, ಸೂಕ್ಷ್ಮವಾದ ಉಗುರು, ಸಮಕಟ್ಟಾದ ಅವಯುವ. ಸೃಷ್ಟಿಕರ್ತನಾದ ಬ್ರಹ್ಮನು ಸಮಸ್ತ ಲಕ್ಷಣಗಳನ್ನೂ, ಸೌಂದರ್ಯವನ್ನೂ ಅಶ್ವತ್ಥಾಮನ ದೇಹದಲ್ಲಿ ತುಂಬಿದ್ದಾನೋ ಎನ್ನುವಂತಿತ್ತು, ಅವನ ಬಾಲ್ಯ.

ಇಂತಹ ಮಂಗಳಸ್ವರೂಪನಾದ ಅಶ್ವತ್ಥಾಮನು ಪ್ರಾಪ್ತವಯಸ್ಕ ನಾಗುವುದರೊಳಗೆ ಸಮಸ್ತ ವಿದ್ಯೆಯನ್ನೂ ಕಲಿತನು. ನಾಲ್ಕುವೇದ ಗಳು, ವೇದಾಂಗಳು, ಶಾಸ್ತ್ರ, ಪುರಾಣ, ಇತಿಹಾಸಗಳನ್ನೆಲ್ಲಾ ಕಂಠ ಪಾಠಮಾಡಿದನು. ಮಂತ್ರಗಳ ಪ್ರಯೋಗವಂತೂ ಅವನ ಸಹಜಗುಣ ವಾಗಿತ್ತು. ಅವನು ಧನುರ್ವಿದ್ಯಾಪಾರಂಗತನಾಗಿ ಮಹಾಚತುರನೆನ್ನಿಸಿ ಕೊಂಡನು. ಇಂತಹ ಅಪಾರ ಗುಣಗಳಿಂದ ಕೂಡಿದ ಅಶ್ವತ್ಥಾಮನು, ಕುಲದಲ್ಲಿ, ರೂಪದಲ್ಲಿ, ಕೀರ್ತಿಯಲ್ಲಿ, ಗುಣದಲ್ಲಿ ಮೇಲೆನಿಸಿದ್ದನು. ಹೀಗೆ ಸಮಸ್ತ ವಿದ್ಯೆಯನ್ನು ಕಲಿತು, ವೀರನಾಗಿ, ತೇಜಸ್ವಿಯಾಗಿ, ತಂದೆಯೊಡ ನಿದ್ದನು.

ಪಾಂಡವರು ವಿರಾಟನಗರದಲ್ಲಿದ್ದಾಗ, ಕೌರವನು, ಕೆಟ್ಟಯೋಚನೆ ಮಾಡಿ, ವಿರಾಟರಾಜನಿಗೆ ಸೇರಿದ ಗೋವುಗಳನ್ನು ಅಪಹರಿಸುವನು.

ಹೀಗೆ ಸೆರೆಹಿಡಿದ ಗೋವುಗಳನ್ನು ಬಿಡಿಸಿಕೊಡಲು, ಅರ್ಜುನನು ತಾನೊಬ್ಬನೇ ಕೌರವನ ಮೇಲೆ ಯುದ್ಧಕ್ಕೆ ಬರುವನು. ಕೌರವನ ಕಡೆ, ಭೀಷ್ಮ, ದ್ರೋಣ, ಕರ್ಣ, ಅಶ್ವತ್ಥಾಮಾದಿ ಅತಿರಥ ಮಹಾರಥರೆಲ್ಲಾ ಯುದ್ಧಕ್ಕೆ ನಿಲ್ಲುವರು. ಆಗ ಅರ್ಜುನನು ತನ್ನ ಗುರುವಾದ ದ್ರೋಣನನ್ನು ಕುರಿತು, 'ಓ! ಆಚಾರ್ಯ! ನಾವು ವನವಾಸ ಮುಗಿಸಿ ಬಂದೆವು. ಕೌರವರಿಗೆ ತಕ್ಕ ಪ್ರತೀಕಾರಮಾಡುವಕಾಲ ಬಂದಿದೆ. ಅದಕ್ಕಾಗಿ ಯುದ್ಧ ಮಾಡಬೇಕಾಗಿದೆ. ನಿಮ್ಮ ಮೇಲೆ ಕೈಮಾಡುವುದು ಅನಿವಾರ್ಯವಾಗಿದೆ. ದಯವಿಟ್ಟು ಅಪ್ಪಣೆ ಕೊಡಿ. ಮನ್ನಿಸಿ' ಎಂದು ಹೇಳಿ ಶಂಖವನ್ನೂದುವನು. ತಂದೆಗಾದ ಅಪಜಯವನ್ನು ಕಂಡು ಅರ್ಜುನನ ಮೇಲೆ ಅಶ್ವತ್ಥಾಮನು ಯುದ್ಧಕ್ಕೆ ನಿಲ್ಲುವನು.

ಅಶ್ವತ್ಥಾಮನು ಕೋಪಾವಿಷ್ಟನಾಗಿ, ಅರ್ಜುನನ ಮೇಲೆ ಬಾಣಗಳ ಮಳೆ ಸುರಿಸುವನು. ಇವರಿಬ್ಬರು ಮಹಾರಥರ ಘೋರ ಯುದ್ಧದ ಪರಿಣಾಮವಾಗಿ, ಸೂರ್ಯನ ಬೆಳಕು ಮರೆಸಿತು. ಗಾಳಿ ಬೀಸದಂತಾಯಿತು. ಬಾಣಗಳಿಂದ ಹೊರಟ ಉರಿ, ಶಾಖ, ಶಬ್ದ ಎಲ್ಲವೂ ಭಯಂಕರವಾಯಿತು. ಸಮಯಕಾದು, ಅಶ್ವತ್ಥಾಮನು ಅರ್ಜುನನ ಬಿಲ್ಲಿನ ನಾಣನ್ನು ಕತ್ತರಿಸಿದನು. ಭಲೆ! ಭಲೆ! ಎಂದು ದೇವತೆಗಳು ಅಶ್ವತ್ಥಾಮನನ್ನು ಕೊಂಡಾಡಿದರು.

ಅರ್ಜುನನು ತನ್ನ ಗಾಂಢೀವಕ್ಕೆ ಇನ್ನೊಂದು ನಾಣನ್ನು ಕಟ್ಟಿ, ಮದದಾನೆಯಂತೆ ಕೋಪಗೊಂಡು ಅಶ್ವತ್ಥಾಮನನ್ನು ಎದುರಿಸಿದನು. ಅವನ ಬಿಲ್ಲನ್ನು ಕತ್ತರಿಸಿದನು. ರಥ, ಕುದುರೆ, ಸಾರಥಿ—ಎಲ್ಲವನ್ನೂ ಘಾಯಪಡಿಸಿದನು. ಅಶ್ವತ್ಥಾಮನ ಬತ್ತಳಿಕೆಯಲ್ಲಿ ಬಾಣಗಳು ಮುಗಿಯುತ್ತ ಬಂದವು. ಅರ್ಜುನನಿಗಾದರೋ ಅಕ್ಷಯ ತೂಣೀರ. ಅಶ್ವತ್ಥಾಮನ ಕೈ ನಿಂತುಹೋಗಿ ಅಪಜಯವಾಯಿತು.

* * * *

ಮುಂದೆ ಮಹಾಭಾರತದ ಯುದ್ಧವಾಗುವುದು. ಭೀಷ್ಮ, ದ್ರೋಣ ಕರ್ಣಾದಿ ವೀರರೆಲ್ಲ ಯುದ್ಧದಲ್ಲಿ ಸಾಯುವರು. ಕೌರವನ ಸೇನೆಯೆಲ್ಲಾ

ಹಾಳಾಗುವುದು. ದುರ್ಯೋಧನ, ಕೃಪ, ಕೃತವರ್ಮ, ಅಶ್ವತ್ಥಾಮ— ಈ ನಾಲ್ವರು ಮಾತ್ರ ಉಳಿದಿದ್ದಾರೆ. ದುರ್ಯೋಧನನು, ಬಲರಾಮನ ಆಗಮನ ನಿರೀಕ್ಷಿಸುತ್ತಾ, ತಾನೊಬ್ಬನೇ ತಲೆಮರೆಸಿಕೊಂಡು ವೈಶಂಪಾಯನ ಸರೋವರದಲ್ಲಿ ಜಲಸ್ತಂಭನ ಮಾಡುವನು. ಅಶ್ವತ್ಥಾಮನು ಅಲ್ಲಿಗೆ ಬಂದು, ತನ್ನ ಸತ್ಯ, ಜಪ, ದಾನಾದಿಗಳ ಮೇಲೆ ಆಣೆಯಿಟ್ಟು, ಶತ್ರುಗಳನ್ನು ಜಯಿಸಿ ದುರ್ಯೋಧನನಿಗೆ ಮಂಗಳವುಂಟುಮಾಡುವಂತೆ ಪ್ರತಿಜ್ಞೆಮಾಡುವನು. ಸೋಮಕರನ್ನೂ, ಪಾಂಚಾಲರನ್ನೂ ಕೊಲ್ಲುವವರೆಗೆ ತಾನು ಕವಚ ತೆಗೆಯುವುದಿಲ್ಲವೆಂದು ಮಾತು ಕೊಡುವನು. ಇಷ್ಟಾದರೂ ದುರ್ಯೋಧನನು ಹೊರಗೆ ಬರುವುದಿಲ್ಲ. ತನಗೆ ವಿಶ್ರಾಂತಿಬೇಕೆಂದೂ, ನಾಲನೆಯ ದಿವಸ ಅವರೊಡನೆ ಸೇರಿ ಯುದ್ಧಮಾಡುವುದಾಗಿಯೂ ಹೇಳಿ, ನೀರಿನಲ್ಲಿಯೇ ಉಳಿದುಬಿಡುವನು. ಆಮೇಲೆ ಪಾಂಡವರು ಅಲ್ಲಿಗೆ ಬಂದು ದುರ್ಯೋಧನನನ್ನು ಮೂದಲಿಸಿ ಮಾತನಾಡಿ, ಅವನನ್ನು ಹೊರಗೆ ಬರುವಂತೆ ಮಾಡಿ, ಭೀಮನೊಡನೆ ಯುದ್ಧ ಸಂಭವಿಸುವಂತಾಗುವುದು. ದುರ್ಯೋಧನನು ಪರಾಜಯಹೊಂದಿ, ತೊಡೆಮುರಿದು, ನೆಲದಲ್ಲಿ ಬೀಳುವನು. ಆ ಸಮಯಕ್ಕೆ ಸರಿಯಾಗಿ ಅಶ್ವತ್ಥಾಮ, ಕೃಪ, ಕೃತವರ್ಮರು ಅಲ್ಲಿಗೆ ಬರುವರು. ಬೇಡರ ಪೆಟ್ಟಿನಿಂದ ನೊಂದ ಆನೆಯಂತೆ ಮಣ್ಣಿನಲ್ಲಿ ಬಿದ್ದು ಒದ್ದಾಡುತ್ತಿದ್ದ ದುರ್ಯೋಧನನನ್ನು ನೋಡಿ, ಮರುಗಿ ಅವನು ಹೀಗೆ ಹೇಳುವನು. ' ಹೇ ! ಕುರುಕುಲ ಚಕ್ರವರ್ತೀ ! ನೀನು ಹೀಗೆ ಹೊರಳುತ್ತಾ ಧೂಳಿನಲ್ಲಿ ಮಲಗಿರುವುದನ್ನು ನೋಡಿದರೆ ಲೋಕದಲ್ಲಿ ಪುಣ್ಯವಿಲ್ಲವೆಂದೇ ಕಾಣುತ್ತದೆ. ಚಕ್ರವರ್ತಿ ಎನ್ನಿಸಿಕೊಂಡಿದ್ದ ನೀನು ಕಾಡಿನಲ್ಲಿ ನಿರ್ಜನವಾದ ಈ ಸ್ಥಳದಲ್ಲಿ ಹೀಗೆ ಬಿದ್ದಿರಬಹುದೇ ? ನಿನ್ನ ಪ್ರಿಯಮಿತ್ರ ಕರ್ಣನು ಹೋದ. ನಿನ್ನ ಪ್ರೀತಿಯ ಸಹೋದರ ದುಶ್ಶಾಸನನು ಸತ್ತ. ನೀನು ಕೂಡ ಧೂಳುಕವಿದ ಮೈಯಿಂದ ಸಾಯುವ ಸ್ಥಿತಿಯಲ್ಲಿರುವೆ. ಭೀಷ್ಮ ದ್ರೋಣಾದಿಗಳೂ ಸತ್ತುಹೋದರು. ಇದನ್ನೆಲ್ಲಾ ನೋಡಿದರೆ, ದೈವಗತಿ ವಿಚಿತ್ರವಾಗಿ ತೋರುವುದು. ಅದನ್ನು ತಿಳಿಯಲು ಯಾರಿಗೂ ಸಾಧ್ಯವಿಲ್ಲ. ಮಹಾರಾಜಾ ! ನಿನ್ನ ಶ್ವೇತಛತ್ರವೆಲ್ಲಿ ? ಸಿಂಹಾಸನವೆಲ್ಲಿ ? ಚಾಮರಗಳೆಲ್ಲಿ ? ಕುಬೇರ ಇಂದ್ರರನ್ನು ಮೀರಿಸಿದ ನಿನ್ನ ಐಶ್ವರ್ಯವೆಲ್ಲ ಎಲ್ಲಿ ಹೋಯಿತು ?

ಚಕ್ರವರ್ತಿಯಾಗಿದ್ದ ನೀನು, ನೆಲದಲ್ಲಿ ಬಿದ್ದು ಮಣ್ಣುಹಿಡಿದ ಹುಲ್ಲುಕಡ್ಡಿಯನ್ನು ಕಚ್ಚುವಂತಾಯಿತೇ? ಇದನ್ನೆಲ್ಲ ನೋಡಿದರೆ, ಜಗತ್ತಿನಲ್ಲಿ ಯಾವುದೂ ಶಾಶ್ವತವಾಗಿ ನಿಲ್ಲುವಂತೆ ಕಾಣುವುದಿಲ್ಲ. ಇದು ಕಾಲವೈಪರೀತ್ಯವಲ್ಲವೆ ?'

ಅಶ್ವತ್ಥಾಮನ ಮಾತುಗಳನ್ನು ಕೇಳಿ ದುರ್ಯೋಧನನು ಮರುಗಿದುದಲ್ಲದೆ, ತಾನಾಗಿಯೇ ಯುದ್ಧವನ್ನಪೇಕ್ಷಿಸಿದವನೆಂದೂ, ವೈರಿಗಳಿಂದ ವಂಚಿತನಾದೆನೆಂದೂ ತಿಳಿಸುವನು. ಇದೆಲ್ಲ ಕೃಷ್ಣನ ಪ್ರಭಾವವೆಂದೂ, ತನ್ನ ಮರಣಕ್ಕಾಗಿ ಯಾರೂ ವ್ಯಥೆಪಡಬಾರದೆಂದೂ ಹೇಳುವನು.

ಈ ಮಾತುಗಳನ್ನು ಕೇಳಿ ಅಶ್ವತ್ಥಾಮನಿಗೆ ಸಹಿಸಲಾರದಷ್ಟು ಕೋಪ ಬರುವುದು. ಅವನ ಕಣ್ಣುಗಳು ಅಗ್ನಿಯಂತೆ ಜ್ವಲಿಸುವುವು. ತನ್ನ ರಾಜನ ದುಃಸ್ಥಿತಿಯನ್ನು ನೋಡಿ ಅವನಿಗೆ ಹಿಡಿಸಲಾರದಷ್ಟು ದುಃಖವಾಗುವುದು. ಅವನ ರಾಜಭಕ್ತಿ ಅಷ್ಟು ಉಗ್ರವಾಗಿತ್ತು. ಕೈಹಿಸುಕಿಕೊಳ್ಳುತ್ತಾ ಗದ್ಗದ ಸ್ವರದಿಂದ 'ಮಹಾರಾಜಾ! ಪಾಂಡವರು ನೀಚರು, ಮೋಸಗಾರರು. ನನ್ನ ತಂದೆಯನ್ನು ಮೋಸದಿಂದ ಕೊಂದರು. ನೀನೊಬ್ಬ ಉಳಿದಿದ್ದೆ. ನಿನ್ನನ್ನೂ ಕೊಂದರು. ತಂದೆ ಸತ್ತಾಗ ಕೂಡ, ನಾನು ಇಷ್ಟು ದುಃಖ ಕಂಡವನಲ್ಲ. ಸತ್ಯವಾಗಿ ಹೇಳುವೆನು, ಪ್ರತಿಜ್ಞೆಮಾಡಿ ಹೇಳುವೆನು, ಇಂದು ರಾತ್ರಿ ವಾಸುದೇವನು ನೋಡುತ್ತಿರುವಂತೆ ಎಲ್ಲ ಪಾಂಚಾಲರನ್ನೂ ಕೊಲ್ಲುವೆನು. ನೀನು ಅಪ್ಪಣೆಕೊಡು' ಎಂದು ಹೇಳುವನು.

ಕೂಡಲೇ ದುರ್ಯೋಧನನು ಸಂತೋಷದಿಂದ ಉಬ್ಬಿ ಕೃಪಾಚಾರ್ಯನಿಂದ ಅಶ್ವತ್ಥಾಮನಿಗೆ ಸೈನ್ಯಾಧಿಪತಿ ಪಟ್ಟಕಟ್ಟಿಸುವನು. ಅಶ್ವತ್ಥಾಮನು ರಾಜನನ್ನಾಲಂಗಿಸಿ, ಸಿಂಹನಾದ ಮಾಡುತ್ತ, ತನ್ನ ಪ್ರತಿಜ್ಞಾಪಾಲನಕ್ಕಾಗಿ ಹೊರಡುವನು. ಅಷ್ಟರಲ್ಲಿ ರಾತ್ರಿಯಾಗುವುದು.

ಭಯಂಕರ ಕಗ್ಗತ್ತಲೆಯಲ್ಲಿ ಅಶ್ವತ್ಥಾಮ, ಕೃಪ, ಕೃತವರ್ಮರು ಪಾಂಡವರ ಪಾಳೆಯದ ಕಡೆ ಹೊರಟರು. ದಾರಿಯಲ್ಲಿದ್ದ ಒಂದು ದೊಡ್ಡ ಆಲದಮರದ ಕೆಳಗೆ ಕೂಡುವರು. ಕೃಪ, ಕೃತವರ್ಮರು ಆಯಾಸದಿಂದ ಹಾಗೆಯೇ ನಿದ್ರಿಸುವರು. ಕ್ರೋಧ, ಮತ್ಸರಗಳಿಂದ ಪರಿತಪಿಸುತ್ತಿದ್ದ ಅಶ್ವತ್ಥಾಮನಿಗೆ ನಿದ್ರೆ ಬರಲಿಲ್ಲ. ಸರ್ಪದಂತೆ ಬುಸುಗುಟ್ಟುತ್ತಿದ್ದನು.

ಮರದ ಮೇಲೆ ಕಾಗೆಗಳು ಗೂಡು ಕಟ್ಟಿಕೊಂಡು, ಬಂಧುಮಿತ್ರರೊಡನೆ ಸುಖವಾಗಿ ನಿದ್ರಿಸುತ್ತಿದ್ದುವು. ಅಂತಹ ಶಾಂತವಾತಾವರಣವಿದ್ದಾಗ, ದೊಡ್ಡದಾದ ಒಂದು ಗೂಬೆಯು ಆ ಮರಕ್ಕೆ ಬಂದು ಗೂಡಿನಲ್ಲಿ ಸುಖವಾಗಿ ನಿದ್ರಿಸುತ್ತಿದ್ದ ಕಾಗೆಗಳನ್ನೂ, ಅವುಗಳ ಮರಿಗಳನ್ನೂ, ಕೊಂದು ತನ್ನ ಹಗೆತನವನ್ನು ತೀರಿಸಿಕೊಳ್ಳುತ್ತಿತ್ತು. ಗೂಬೆಯ ಕಾರ್ಯವನ್ನು ಅಶ್ವತ್ಥಾಮನು ನೋಡಿದನು. ಅದರಿಂದ ಅವನು ಉಪದೇಶಪಡೆದಂತಾಯಿತು. ತಾನೂ ಕೂಡ ಅದರಂತೆ ಶತ್ರು ಪಾಳೆಯವನ್ನು ಆ ರಾತ್ರಿಯೇ ಹೊಕ್ಕು, ಅವರನ್ನು ಕ್ಷಣಕಾಲದಲ್ಲಿ ಕೊಂದುಹಾಕುವುದು ಯುಕ್ತವೆಂದು ನಿಶ್ಚಯಮಾಡಿದನು. ಭೀಷ್ಮ, ದ್ರೋಣ, ಕರ್ಣ, ಜಯದ್ರಥಾದಿ ವೀರಾಧಿವೀರರು ಯುದ್ಧದಲ್ಲಿ ಅಪಜಯಹೊಂದಿ ಮಡಿದರು. ಕಪಟದಿಂದಲೇ ಈಗ ಕಾರ್ಯ ಸಿದ್ಧಿಯಾಗಬೇಕು. ಪಾಂಡವರು ಹಾಗೆ ಮಾಡಲಿಲ್ಲವೇ ? ತಾನು ಮಾಡಿದರೆ ಅದರಲ್ಲಿ ತಪ್ಪೇನು ? ಪಾಂಚಾಲರನ್ನು ನಿದ್ರಿಸುವಾಗಲೇ ಕೊಲ್ಲುವುದು ಸರಿಯೇ ಎಂದು ಯೋಚಿಸಿದನು.

ನಿದ್ರಿಸುತ್ತಿದ್ದ ಕೃಪನನ್ನು ಎಬ್ಬಿಸಿ, 'ಮಾವಾ ! ಯುದ್ಧವೀರನೂ, ಚಕ್ರವರ್ತಿಯೂ ಆದ ನಮ್ಮ ರಾಜನು ಭೀಮನಿಂದ ವಧಿಸಲ್ಪಟ್ಟನು. ನೀಚನಾದ ಭೀಮನು ನಮ್ಮ ರಾಜನ ಕಿರೀಟವನ್ನೂ, ತಲೆಯನ್ನೂ ತನ್ನ ಕಾಲಿನಿಂದ ಒದೆದನು. ಇದು ಕ್ರೂರಕಾರ್ಯವಲ್ಲವೇ ? ಪಾಂಚಾಲರು ಈಗ ಕೊಬ್ಬಿನಿಂದಲೂ ಗರ್ವದಿಂದಲೂ ನಗುವರು. ಪಾಂಡವರು ವಿಜಯವಾದೆವೆಂದು ಸಂತೋಷದಿಂದಿರುವರು. ಪಾಂಡವರು ನೂರಾನೆ ಬಲವುಳ್ಳವರು, ಅಸ್ತ್ರವಿಶಾರದರು, ಯುದ್ಧದಲ್ಲಿ ಅವರನ್ನು ಕೊಲ್ಲುವುದು ಕಷ್ಟ. ನಿದ್ರಿಸುತ್ತಿರುವಾಗಲೆ, ಅವರನ್ನೆಲ್ಲ ಕೊಲ್ಲಬೇಕು. ನಿನ್ನ ಅಭಿಪ್ರಾಯ ವೇನು ?' ಎಂದು ಕೇಳಿದನು.

ಹಾಗೆ ಮಾಡುವುದು ಧರ್ಮವಲ್ಲ ; ಸಾಧುವಲ್ಲ ; ಯುದ್ಧಮಾಡಿಯೇ ಕೊಲ್ಲಬೇಕು ; ಇಲ್ಲ ಸಾಯಬೇಕು ಎಂದು ಕೃಪಾಚಾರ್ಯನು ಬುದ್ಧಿಹೇಳಿದನು. ದುಃಖ ಕೋಪಗಳಿಂದ ತಪಿಸುತ್ತಿರುವ ಅಶ್ವತ್ಥಾಮನಿಗೆ ಕೃಪನ ಬುದ್ಧಿಮಾತುಗಳು ಹೇಗೆತಾನೇ ಹಿಡಿಸೀತು ? 'ಮಾವಾ ! ಮಾನವರು ತಮತಮಗೆ ತೋರಿದ ಆಲೋಚನೆ ಉತ್ತಮವೆಂದು ತಿಳಿಯುವುದು

ಅವರ ಸ್ವಭಾವ. ಹೀಗೆ ತಿಳಿದು ಸಂತೋಷಿಸಿ, ತನ್ನನ್ನು ತಾನೇ ಗೌರವಿಸಿ ಕೊಳ್ಳುವನು. ಉತ್ತಮ ವೈದ್ಯನು ರೋಗಿಯ ರೋಗವನ್ನು ಕಂಡುಹಿಡಿದು ಔಷಧಿ ಪ್ರಯೋಗಿಸುವಂತೆ, ಮಾನವನು, ತನ್ನ ಕಾರ್ಯಸಿದ್ಧಿಗೆ ತಕ್ಕ ಬುದ್ಧಿ ಯನ್ನುಪಯೋಗಿಸುವನು. ಬಾಲ್ಯ, ಯೌವನ, ಮುಪ್ಪಿನಲ್ಲಿ ಅವನ ಬುದ್ಧಿ ಬೇರೆ ಬೇರೆಯಾಗಿರುವುದು. ನನಗೆ ತೋರಿದ ಯೋಚನೆ ಹೇಳುವೆನು ಕೇಳು.

'ಬ್ರಹ್ಮನು ಪ್ರಜೆಗಳನ್ನು ಸೃಷ್ಟಿಸಿದ್ದಾನೆ. ವರ್ಣಾಶ್ರಮಗಳನ್ನು ಏರ್ಪಡಿಸಿದ್ದಾನೆ. ಅದಕ್ಕೆ ತಕ್ಕ ಗುಣಗಳನ್ನು ಕೊಟ್ಟಿದ್ದಾನೆ. ನಾನು ಈಗ ಕ್ಷತ್ರಿಯಧರ್ಮವನ್ನು ಕೈಗೊಂಡು ಸೈನ್ಯಾಧಿಪತಿಯಾಗಿದ್ದೇನೆ. ನೀನು ಬ್ರಾಹ್ಮಣ. ನಿನ್ನನ್ನು ಆಶ್ರಯಿಸುವುದು ಸರಿಯಲ್ಲ. ಇದು ಸಾಧುವಲ್ಲ. ಈಗ ನನ್ನಲ್ಲಿ ಉತ್ತಮ ಅಸ್ತ್ರಗಳಿವೆ, ದಿವ್ಯವಾದ ಧನುಸ್ಸಿದೆ. ಮೇಲಾಗಿ ಕ್ಷತ್ರಿಯಧರ್ಮ ಕೈಗೊಂಡಿದ್ದೇನೆ. ನನ್ನ ರಾಜ ದುರ್ಯೋಧನ, ನನ್ನ ತಂದೆ ದ್ರೋಣಾಚಾರ್ಯ, ಇವರಿಗಾಗಿರುವ ಅತ್ಯಾಚಾರದ ಸಾಲ ತೀರಿಸಿ ಕೊಳ್ಳದಿದ್ದರೆ ಹೇಗೆ ? ಈಗ ಪಾಂಡವರೂ ಪಾಂಚಾಲರೂ ಜಯಹೊಂದಿದೆ ವೆಂಬ ಕೊಬ್ಬಿನಿಂದ ನಿರ್ಭಯವಾಗಿ ನಿದ್ರಿಸುತ್ತಿದ್ದಾರೆ. ಅಗ್ನಿಯು ಒಣಗಿದ ಕಾಡನ್ನು ಸುಡುವಂತೆ, ಇಂದ್ರನು ರಾಕ್ಷಸರನ್ನು ಕೊಂದಂತೆ, ಅವರನ್ನು ಕೊಂದಲ್ಲದೆ ನನಗೆ ಶಾಂತಿಯಿಲ್ಲ. ಹಾಗೆ ಮಾಡಿ ತಂದೆಯ ಋಣವನ್ನು ತೀರಿಸುವೆನು. ನನ್ನ ರಾಜನಾದ ದುರ್ಯೋಧನನಿಗೆ ಪ್ರಿಯವನ್ನುಂಟು ಮಾಡುವೆನು' ಎಂದು ಹೇಳಿದನು.

ರಾತ್ರಿಕಾಲದಲ್ಲಿ ಹಾಗೆ ಮಾಡಬೇಡವೆಂದೂ ಬೆಳಗಾದ ಮೇಲೆ ತಾವು ಮೂವರೂ ಸೇರಿ ಪಾಂಡವರೊಡನೆ ಯುದ್ಧಮಾಡಿದರೆ, ಅವರನ್ನು ಕೊಲ್ಲ ಬಹುದೆಂದೂ ಧೈರ್ಯಹೇಳುವನು. ಆಯಾಸ ಪರಿಹಾರವಾಗಲು ಸ್ವಲ್ಪ ನಿದ್ರೆಮಾಡುವಂತೆ ಸೂಚಿಸುವನು.

ಕೃಪನ ಮಾತುಗಳು ಅಶ್ವತ್ಥಾಮನಿಗೆ ಹಿಡಿಸಲಿಲ್ಲ. 'ಮಾವಾ ! ನನಗೆ ನಿದ್ರೆ ಎಂದರೇನು ? ರೋಗಿಗೂ, ಕಾಮಾತುರನಿಗೂ, ಕಾರ್ಯಾ ಲೋಚನೆ ಇರುವವನಿಗೂ ನಿದ್ರೆ ಬರುವುದೇ ? ತಂದೆಯ ಕೊಲೆಯನ್ನು ನೆನಸಿಕೊಂಡರೆ, ಹೃದಯ ದಹಿಸಿಹೋಗುತ್ತಿದೆ. ನನ್ನ ಇದಿರಿನಲ್ಲಿಯೇ ತಂದೆಯ ಕೊಲೆಯಾಗಲಿಲ್ಲವೇ ? ಅದನ್ನು ಹೇಗೆ ಸಹಿಸುವುದು. ಅದೂ

ಹೋಗಲಿ, ನಮ್ಮ ರಾಜನ ಸ್ಥಿತಿಯನ್ನು ನೋಡಿದ ಮೇಲಂತೂ, ಕೋಪ ಮಿತಿಮೀರಿತು. ಭೀಮನ ಗದೆಯ ಪೆಟ್ಟಿನಿಂದ ತೊಡೆ ಮುರಿದು ಬಿದ್ದಿರುವನಲ್ಲಾ ? ಶತ್ರು ವಧವಾದಲ್ಲದೆ ನಿದ್ರೆ ಹೇಗೆತಾನೆ ಬರುವುದು ? ವಿಶ್ರಾಂತಿ ಹೇಗೆ ಬೇಕಾಗುವುದು ? ನೆಮ್ಮದಿ ಹೇಗುಂಟಾಗುವುದು ? ಪಾಂಚಾಲರನ್ನು ಕೊಂದಲ್ಲದೆ ನಾನು ನಿದ್ರೆಮಾಡೆನು' ಹೀಗೆ ಹೇಳಿ ಶತ್ರು ಶಿಬಿರದ ಕಡೆ ಹೊರಟೇಬಿಟ್ಟನು. ಅವನ ಹಿಂದೆ ಕೃತವರ್ಮರೂ ಹೋದರು.

ಅಶ್ವತ್ಥಾಮನು ಶತ್ರುಬಿಡಾರದ ಬಾಗಿಲ ಬಳಿ ಬಂದು ನಿಂತಾಗ, ಅವನೆದುರಿಗೆ ದೊಡ್ಡ ಭೂತ ಬಂದು ನಿಂತಿತು. ಅದಕ್ಕೆ ಚಂದ್ರಸೂರ್ಯರನ್ನು ಹೋಲುವ ದೇಹಕಾಂತಿ. ಹುಲಿದೊಗಲಿನ ಉಡುಪು. ಸರ್ಪರೂಪದ ಜನಿವಾರ. ಹಾವಿನ ತೋಳ್ಬಳೆ. ಭಯಂಕರ ಕೋರೆಹಲ್ಲು. ವಿಚಿತ್ರ ರೀತಿಯ ಕಣ್ಣು. ಆ ಭಯಂಕರ ಭೂತವನ್ನು ನೋಡಿ ಅಶ್ವತ್ಥಾಮನು ಹೆದರದೆ ಅದರ ಮೇಲೆ ಅಸ್ತ್ರಪ್ರಯೋಗ ಮಾಡಿದನು. ಅವನು ಬಿಟ್ಟ ಬಾಣಗಳನ್ನೆಲ್ಲಾ ಆ ಭೂತವು ನುಂಗುತ್ತಾ ಬಂದಿತು. ಅಶ್ವತ್ಥಾಮನು ಉಗ್ರಶಕ್ತಿಯನ್ನು ಪ್ರಯೋಗಿಸಿದನು. ಅದು ಭೂತಕ್ಕೆ ತಾಕಿದೊಡನೆ ಶಕ್ತಿಯೇ ಚೂರಾಯಿತು. ಇಂದ್ರಧ್ವಜಕ್ಕೆ ಸಮಾನವಾದ ಗದಾಶಕ್ತಿಯನ್ನು ಬಿಟ್ಟನು. ಅದನ್ನೂ ಅದು ನುಂಗಿಬಿಟ್ಟಿತು. ಹೀಗೆ ತನ್ನ ಶಕ್ತಿ ಎಲ್ಲಾ ವ್ಯರ್ಥವಾಗುತ್ತಿರಲು, ಕೃಪನ ಮಾತನ್ನು ತಾನು ಕೇಳಬೇಕಾಗಿತ್ತೆನ್ನಿಸಿತು ಅವನಿಗೆ. ಅವನು ಹೇಳಿದ ಧರ್ಮರಹಸ್ಯಗಳು ಜ್ಞಾಪಕಕ್ಕೆ ಬಂದವು. ದೈವಬಲ ಮೀರಿ ನಡೆದುದರಿಂದ ಹೀಗಾಯಿತೆಂಬ ಯೋಚನೆಯಾಯಿತು. ಆದರೂ ಧೈರ್ಯಗುಂದದೆ, ತನ್ನ ಇಷ್ಟದೇವರಾದ ಮಹಾದೇವನನ್ನು ಮರೆಹೋಗುವುದೇ ಇದಕ್ಕೆ ತಕ್ಕ ಉಪಾಯವೆಂದು ನಿಶ್ಚಯಮಾಡಿದನು.

ಪಂಚಭೂತಗಳಿಂದಾದ ತನ್ನ ಶರೀರವನ್ನು ಮಹಾ ರುದ್ರನಿಗೆ ಅರ್ಪಿಸುವುದಾಗಿ ನಿರ್ಧರಮಾಡಿ, ಹೀಗೆ ಪ್ರಾರ್ಥಿಸುವನು. 'ಹೇ ! ಸರ್ವೇಶ್ವರಾ ! ಕೈಲಾಸವಾಸೀ ! ಮಂಗಳರೂಪ ! ನೀಲಕಂಠಾ ! ಉಮಾಪತಿ ! ಗಣನಾಥಾ ! ಜಟಾಧಾರಿ ! ಪರಶಿವಾ ! ನಿನ್ನನ್ನು ಅನನ್ಯಭಕ್ತಿಯಿಂದ ಆರಾಧಿಸುವೆನು. ನೀನು ಉತ್ತಮೋತ್ತಮನು, ತ್ರಿನೇತ್ರನು,

ಕುಬೇರಸಖನು, ಪಾರ್ವತೀಪತಿಯು ಚಂದ್ರಶೇಖರನು, ಲೋಕಶರಣ್ಯನು, ದೇವದೇವೋತ್ತಮನು. ಓ ! ಮಹಾರುದ್ರಾ ! ನನ್ನನ್ನು ಈ ಆಪತ್ತಿನಿಂದ ಪಾರುಮಾಡು. ನಿನ್ನನ್ನು ಶರಣುಹೋಗುವೆನು' ಎಂದು ಬೇಡಿದನು.

ಹೀಗೆ ಅಶ್ವತ್ಥಾಮನು ಭಕ್ತಿಯಿಂದ ಪ್ರಾರ್ಥಿಸಲು, ಅವನೆದುರಿಗೆ ಒಂದು ಅಗ್ನಿ ವೇದಿಕೆ ಕಾಣಿಸಿತು. ಆದರಲ್ಲಿ ದೊಡ್ಡದೊಂದು ಜ್ವಾಲೆ ಎದ್ದಿತು. ಅದರ ಸುತ್ತಲೂ ವಿವಿಧಾಕಾರವುಳ್ಳ, ವಿವಿಧ ಮುಖಗಳುಳ್ಳ, ಜಟಾಧಾರಿಗಳಾದ ಹಲವು ಭೂತಗಳು ಕೈಯಲ್ಲಿ ಕೊಳ್ಳಿ, ಶೂಲ, ಪಟ್ಟಸ ಮುಂತಾದ ಭಯಂಕರ ಆಯುಧಗಳನ್ನು ಹಿಡಿದು ವೇದಿಕೆಯನ್ನು ಸುತ್ತುತ್ತ, 'ಹರ ಹರ ಮಹಾದೇವಾ !' ಎಂದು ರುದ್ರನನ್ನು ಸ್ತುತಿಸುತ್ತಿದ್ದುವು. ಅದನ್ನು ನೋಡಿ ಹೆದರದೆ ಅಶ್ವತ್ಥಾಮನು ತನ್ನನ್ನೇ ಅರ್ಪಿಸಬೇಕೆಂದು ನಿರ್ಧರಮಾಡಿದನು. ಅವನಿಗೆ ಬಿಲ್ಲೇ ಸಮಿತ್ತು, ಬಾಣಗಳೇ ಪವಿತ್ರ, ಆತ್ಮವೇ ಹವಿಸ್ಸು, ರುದ್ರಪ್ರೀತಿಕರವಾದ ರೌದ್ರ ವ್ರತದಿಂದ ಮಹಾರುದ್ರನಿಗೆ ನಮಸ್ಕಾರ ಮಾಡಿ ಪ್ರಾರ್ಥಿಸುವನು.

'ಓ ! ಮಹಾದೇವಾ ! ಜೀವಾಧಾರಾ ! ಶತ್ರುಗಳು ನಮಗೆ ದುರ್ಜಯರಾಗುವುದಾದರೆ ನನ್ನನ್ನು ನೀನು ಹವಿಸ್ಸಾಗಿ ಸ್ವೀಕರಿಸು' ಎಂದು ದೃಢ ಮನಸ್ಸಿನಿಂದ ಅಗ್ನಿವೇದಿಕೆಯ ಮಧ್ಯದಲ್ಲಿ ಹೋಗಿ ಕುಳಿತುಕೊಳ್ಳುವನು. ಆತ್ಮಸಮರ್ಪಣೆ ಮಾಡಿಕೊಳ್ಳಲು ನಿಶ್ಚಯಮಾಡುವನು. ಆಗ ಮಹಾದೇವನು ಅವನಿಗೆ ಪ್ರತ್ಯಕ್ಷವಾಗುವನು. ಮುಗುಳುನಗೆಯಿಂದ, 'ಕುಮಾರಾ ! ಮಹಾರಥಿಕನಾದ ಅರ್ಜುನನು ತಪಸ್ಸು, ನಿಯಮ, ತಾಳ್ಮೆ, ಭಕ್ತಿ, ಧೈರ್ಯ ಇವುಗಳಿಂದ ನನ್ನನ್ನು ಆರಾಧಿಸಿರುವನು. ಅವನಿಗಿಂತ ಪ್ರಿಯನಾದವನು ನನಗಿನ್ನೊಬ್ಬನಿಲ್ಲ. ನಿನ್ನನ್ನು ಪರೀಕ್ಷಿಸುವುದಕ್ಕೆ ಹೀಗೆ ಮಾಡಿದೆನು. ಇದುವರೆಗೂ ಪಾಂಚಾಲರನ್ನು ರಕ್ಷಿಸಿದೆ. ಅರ್ಜುನನಿಗಾಗಿಯೇ ಹೀಗೆ ಮಾಡಿದೆ. ಇನ್ನು ಅವರು ಉಳಿಯುವಂತಿಲ್ಲ. ಇಗೋ ಈ ಖಡ್ಗ ತೆಗೆದುಕೋ, ನಿನ್ನ ಇಷ್ಟ ನೆರವೇರುವುದು' ಎಂದು ಹೇಳಿ ಅಶ್ವತ್ಥಾಮನ ದೇಹದಲ್ಲಿ ತಾನು ಪ್ರವೇಶಮಾಡಿದನು. ಅನಂತರ, ಅಶ್ವತ್ಥಾಮನು ಆ ಕಾಳರಾತ್ರಿಯಲ್ಲಿ ಶತ್ರುಶಿಬಿರವನ್ನು ಪ್ರವೇಶಮಾಡಿ, ಸಮಸ್ತ ಪಾಂಚಾಲರನ್ನು ಅವರು ಮಲಗಿರುವಾಗಲೇ ಕೊಂದನು.

ಅಶ್ವತ್ಥಾಮನ ಸಾಹಸಕಾರ್ಯವನ್ನು ದುರ್ಯೋಧನನು ಮೆಚ್ಚಿದನು. ಅವನಿಗೆ ಸಂತೋಷವಾಯಿತು. ಅವನು ಮಾಡಿದಷ್ಟು ಕಾರ್ಯವನ್ನು ತನ್ನ ತಾತ ಭೀಷ್ಮನಾಗಲಿ, ಆಚಾರ್ಯ ದ್ರೋಣನಾಗಲಿ, ಪರಮಮಿತ್ರನಾದ ಕರ್ಣನಾಗಲಿ ಮಾಡಲಿಲ್ಲವೆಂದು ಹೊಗಳಿದನು. ತಾನು ಇಂದ್ರ ಸಮಾನನಾದಷ್ಟು ಸಂತೋಷಪಟ್ಟೆನೆಂದು ತಿಳಿಸಿ, ಆಚಾರ್ಯ ಪುತ್ರನಿಗೆ ಮಂಗಳವುಂಟಾಗುವಂತೆ ಹರಸಿ, ದುರ್ಯೋಧನನು ಪ್ರಾಣ ಬಿಟ್ಟನು.

* * *

ಒಂದಾನೊಂದು ಕಾಲದಲ್ಲಿ ಅಶ್ವತ್ಥಾಮನು ತೀರ್ಥಯಾತ್ರೆಗಾಗಿ ಹೊರಟಾಗ ದಾರಿಯಲ್ಲಿ ದ್ವಾರಕೆ ಸಿಕ್ಕಿತು. ಅಲ್ಲಿ ವೃಷ್ಣಿಗಳ ಸತ್ಕಾರವನ್ನು ಕೈಗೊಂಡನು. ಕೆಲವು ದಿನ ಅಲ್ಲಿಯೇ ಇದ್ದನು. ಸಮುದ್ರ ತೀರದಲ್ಲಿ ಏಕಾಕಿಯಾಗಿದ್ದ ಕೃಷ್ಣನ ಬಳಿಗೆ ಬಂದು, ತನ್ನಲ್ಲಿ ಅತ್ಯುತ್ತಮ ಅಸ್ತ್ರಗಳಿವೆ ಎಂದೂ, ಬ್ರಹ್ಮಶಿರಸ್ಸೆಂಬ ಮಹಾಸ್ತ್ರವಿರುವುದೆಂದೂ, ಅದನ್ನು ತೆಗೆದುಕೊಂಡು ಅವನ ಚಕ್ರವನ್ನು ತನಗೆ ಕೊಡಬೇಕೆಂದೂ ಕೇಳಿದನು. ದೈನ್ಯದಿಂದ ಯಾಚಿಸುತ್ತಿರುವ ಅಶ್ವತ್ಥಾಮನನ್ನು ಕಂಡು ಕೃಷ್ಣನಿಗೆ ಮರುಕವುಂಟಾಯಿತು. ಆಗ ಕೃಷ್ಣನು ತನ್ನಲ್ಲಿದ್ದ ಗದೆ, ಶಾರ್ಙ, ಶಂಖ, ಚಕ್ರಗಳಲ್ಲಿ ತನಗೆ ಯಾವುದು ಬೇಕೋ ಅದನ್ನು ಆರಿಸಿಕೊಳ್ಳುವಂತೆ ತಿಳಿಸಿದನು. ಸಾವಿರ ಅಲಗುಗಳುಳ್ಳ ಸುನಾಭವೆಂಬ ಚಕ್ರ ತನಗೆ ಬೇಕೆಂದು ಅಶ್ವತ್ಥಾಮನು ಕೇಳಿದನು. ಅದನ್ನೇ ತೆಗೆದುಕೊಂಡು ಹೋಗುವಂತೆ ಕೃಷ್ಣನು ಅಪ್ಪಣೆ ಇತ್ತನು. ಅಶ್ವತ್ಥಾಮನು ಅಲಕ್ಷ್ಯದಿಂದ ತನ್ನ ಎಡಗೈಯ್ಯನ್ನು ಚಕ್ರದ ಮೇಲಿಟ್ಟು ಎತ್ತುವುದಕ್ಕೆ ಹೋದನು. ಸಾಧ್ಯವಾಗಲಿಲ್ಲ. ಆಮೇಲೆ ಬಲಗೈಯಿಂದ ಎತ್ತಿದನು. ಆಗಲೂ ಆಗಲಿಲ್ಲ. ತನ್ನ ಸರ್ವ ಶಕ್ತಿಯನ್ನು ಪ್ರಯೋಗಿಸಿ ಎರಡು ಕೈಯಿಂದ ಎತ್ತಲು ಯತ್ನಿಸಿದನು. ಅವನಿಗೆ ಆಯಾಸವಾಯಿತೇ ವಿನಹ, ಎತ್ತುವುದಕ್ಕಾಗಲಿಲ್ಲ. ಅಶ್ವತ್ಥಾಮನು ಮಹಾ ವ್ಯಸನದಿಂದ ತಬ್ಬಿಬ್ಬಾದನು. ಆಗ ಶ್ರೀಕೃಷ್ಣನು ಅವನನ್ನು ಕುರಿತು ಹೀಗೆ ಹೇಳಿದನು.

'ಓ! ದ್ರೋಣಪುತ್ರಾ! ನನಗೆ ಅರ್ಜುನನಿಗಿಂತ ಪ್ರಿಯನಾದವನು ಮತ್ತೊಬ್ಬನಿಲ್ಲ. ದೇವ ಮನುಷ್ಯರಿಗೆಲ್ಲ ಅವನು ಆದರ್ಶನು. ಗಾಂಢೀವ ಧಾರಿ, ಕಪಿಧ್ವಜ. ಪರಶಿವನೊಡನೆ ಯುದ್ಧಮಾಡಿ ಅವನ ಪ್ರೀತಿ ಗಳಿಸಿದನು. ಅಂತಹವನೂ ಕೂಡ ನೀನು ಹೇಳಿದಂತೆ ಹೇಳಲಿಲ್ಲ. ನನ್ನ ಅಸ್ತ್ರವನ್ನು ಕೇಳಲಿಲ್ಲ. ನನ್ನ ಮಗ ಪ್ರದ್ಯುಮ್ನ ಕೂಡ ಈ ದಿವ್ಯ ಚಕ್ರವನ್ನು ಯಾಚಿಸಲಿಲ್ಲ. ನನ್ನ ಸಹೋದರ ಬಲರಾಮನಾಗಲಿ, ಸಾಂಬನಾಗಲಿ, ಯಾರೂ ಕೇಳಲಿಲ್ಲ. ನೀನು ಯಾರನ್ನು ಎದುರಿಸ ಬೇಕೆಂದು ಇದನ್ನು ಕೇಳುವೆ' ಎಂದು ಕೇಳಿದನು. ಈ ಮಾತುಗಳನ್ನು ಕೇಳಿ ಅಶ್ವತ್ಥಾಮನು, ಆ ಚಕ್ರವು ಯಾದವ ಶ್ರೇಷ್ಠನಾದ ಕೃಷ್ಣನಿಗಲ್ಲದೆ ಇನ್ನಾರಿಗೂ ಅದನ್ನು ಪ್ರಯೋಗಿಸಲು ಸಾಧ್ಯವಿಲ್ಲ, ಕೃಷ್ಣನ ಅನು ಗ್ರಹವೇ ತನಗೆ ಸಾಕೆಂದು ಹೇಳಿ, ಕೃಷ್ಣನ ಅಪ್ಪಣೆ ಪಡೆದು ಹೊರಟು ಹೋದನು.

ಅಶ್ವತ್ಥಾಮನು ಮಹಾದೇವನಿಂದ ಖಡ್ಗ ಪಡೆದು ಪಾಂಚಾಲರನ್ನು ಕೊಂದು, ಆ ಪಾಪ ಕಳೆಯುವುದಕ್ಕಾಗಿ ಗಂಗಾಸ್ನಾನಕ್ಕೆ ಬರುವನು. ಅಲ್ಲಿ ಮೈಗೆಲ್ಲಾ ಎಣ್ಣೆಯನ್ನು ಲೇಪಿಸಿಕೊಂಡು ನಾರುಮಡಿಯನ್ನುಟ್ಟು ದರ್ಭಾಸನದಲ್ಲಿ ಕುಳಿತಿದ್ದನು. ಹತ್ತಿರ ವ್ಯಾಸರೂ, ಇನ್ನೂ ಅನೇಕ ಮಹರ್ಷಿಗಳೂ ಇದ್ದರು. ಅಷ್ಟರಲ್ಲಿ ಕೃಷ್ಣಾರ್ಜುನರೂ ಧರ್ಮರಾಯನೂ ಅಲ್ಲಿಗೆ ಬರುವರು. ಇವರನ್ನು ನೋಡಿ ಅಶ್ವತ್ಥಾಮನಿಗೆ ಭಯವಾಗುವುದು. ಕೂಡಲೇ ಹತ್ತಿರವಿದ್ದ ದರ್ಭೆಹುಲ್ಲನ್ನು ಎತ್ತಿ ಬ್ರಹ್ಮಶಿರಸ್ಸೆಂಬ ಅಸ್ತ್ರವನ್ನು ತೆಗೆದು ಅಭಿಮಂತ್ರಿಸಿ, ಪಾಂಡವರು ನಾಶವಾಗಲಿ ಎಂದು ಹೇಳಿ ಅರ್ಜುನನ ಮೇಲೆ ಪ್ರಯೋಗಿಸಿದನು. ಶ್ರೀಕೃಷ್ಣನ ಅಪ್ಪಣೆಯಂತೆ ಅರ್ಜುನನೂ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಈ ಎರಡು ಅಸ್ತ್ರ ಗಳೂ ದಳ್ಳುರಿ ಕಾರುತ್ತಿದ್ದುವು. ಪ್ರಳಯಾಗ್ನಿ ಬರುವಂತಿತ್ತು. ಈ ಜ್ವಾಲೆ ಇಡೀ ಲೋಕವನ್ನು ತತ್ತರಗೊಳಿಸಿತು. ಸರ್ವ ಧರ್ಮಗಳನ್ನೂ ಬಲ್ಲ ವ್ಯಾಸನು, ಸಮಸ್ತ ಪ್ರಾಣಿಗಳಿಗೂ ಕ್ಷೇಮ ಬಯಸಿ, ಈ ಎರಡು ಅಸ್ತ್ರಗಳ ಮಧ್ಯೆ ಬಂದು ನಿಂತನು. ಅರ್ಜುನನನ್ನೂ, ಅಶ್ವತ್ಥಾಮನನನ್ನೂ ಕರೆದು ಇಂತಹ ಅಸ್ತ್ರವನ್ನು ಯಾರೂ ಯಾವಾಗಲೂ ಪ್ರಯೋಗಿಸಿಲ್ಲ. ಹಾಗೆ

ಮಾಡಿದುದು ಸರಿಯಲ್ಲ. ಅವನ್ನು ಉಪಶಮನಮಾಡುವಂತೆ ಹೇಳಿದನು. ವ್ಯಾಸರ ಸೂಚನೆಯಂತೆ ಅರ್ಜುನನು ಹಾಗೆಯೇ ಮಾಡಿದನು. ಆದರೆ ಅಶ್ವತ್ಥಾಮನಿಗೆ ಹಾಗೆ ಮಾಡಲು ಸಾಧ್ಯವಾಗಲಿಲ್ಲ. ಆಗ ವ್ಯಾಸನು, 'ಕುಮಾರಾ! ಅಶ್ವತ್ಥಾಮಾ! ನಿನ್ನ ಹಾಗೆ ದುರುದ್ದೇಶದಿಂದ ಅರ್ಜುನನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಲಿಲ್ಲ. ನಿನ್ನನ್ನೂ, ನಿನ್ನ ಅಸ್ತ್ರವನ್ನೂ ಭಂಗಪಡಿಸುವುದಕ್ಕೆ ಶಕ್ತಿ ಇದ್ದರೂ, ಆಚಾರ್ಯಪುತ್ರನಾದ ನಿನ್ನಲ್ಲಿ ಅರ್ಜುನನು ಗೌರವ ತೋರಿಸಿದ್ದಾನೆ. ಇನ್ನು ನೀನು ಕೋಪವನ್ನು ಬಿಡು. ಅದು ಯಾವಾಗಲೂ ಒಳ್ಳೆಯದಲ್ಲ. ಧರ್ಮರಾಜನು ಧರ್ಮವನ್ನು ಮೀರಿದವನಲ್ಲ. ಪಾಂಡವರನ್ನು ರಕ್ಷಿಸಬೇಕಾದುದು ನಮ್ಮ ಕರ್ತವ್ಯ. ಅದು ಕೂಡ ನಿನ್ನ ಕರ್ತವ್ಯ. ನಿನ್ನ ತಲೆಯಲ್ಲಿರುವ ಸಹಜಮಣಿಯನ್ನು ತೆಗೆದುಕೊಡು. ಅವರು ಅದರಿಂದ ತೃಪ್ತರಾಗಿ, ನೀನು ಸ್ಥಿರಜೀವಿಯಾಗಿರುವಂತೆ ಹರಸುವರು' ಎಂದು ವ್ಯಾಸಮಹರ್ಷಿ ಹೇಳಿದನು.

ತನ್ನ ತಲೆಯ ಮಣಿಯನ್ನು ಕೊಡುವುದಕ್ಕೆ ಇಷ್ಟವಿಲ್ಲದಿದ್ದರೂ, ಅಶ್ವತ್ಥಾಮನು ವ್ಯಾಸನ ಮಾತನ್ನು ಮೀರುವಂತಿಲ್ಲ. ಆ ಮಣಿಯನ್ನು ಧರಿಸಿದವನಿಗೆ ಯಾವ ಭಯವೂ ಇಲ್ಲ, ರೋಗಬರುತ್ತಿರಲಿಲ್ಲ, ಹಸಿವಾಗುತ್ತಿರಲಿಲ್ಲ, ಶತ್ರುಭಯವಂತೂ ಇರುತ್ತಿರಲಿಲ್ಲ. ಅಂತಹ ಉತ್ತಮ ಮಣಿಯನ್ನು ಅಶ್ವತ್ಥಾಮನು ತನ್ನ ತಲೆಯಿಂದ ತೆಗೆದು ಅರ್ಜುನನಿಗೆ ಕೊಟ್ಟನು. ಅದನ್ನು ಅವನು ದ್ರೌಪದಿಗೆ ತೋರಿಸಿದನು.

ಅಶ್ವತ್ಥಾಮನು ಒಬ್ಬ ಮಹಾಪುರುಷ. ಪರಮೇಶ್ವರನನ್ನು ಮೆಚ್ಚಿಸಿ ವರ ಪಡೆದನು. ರುದ್ರನ ಅಂಶದಿಂದಲೇ ಹುಟ್ಟಿದವನು. ಮಹಾಪರಾಕ್ರಮಿ, ಶ್ರೀಕೃಷ್ಣನ ಅನುಗ್ರಹಕ್ಕೆ ಪಾತ್ರನಾದವನು. ಉತ್ತಮ ಕುಲದಲ್ಲಿ ಹುಟ್ಟಿ, ಉತ್ತಮ ಯೋಗ್ಯತೆ ಪಡೆದವನು. ಗುರುಹಿರಿಯರನ್ನು ಕಂಡರೆ ಅಪಾರ ಗೌರವ. ಎಂತಹ ಸಾಹಸಕಾರ್ಯವನ್ನು ಬೇಕಾದರೂ ಸಾಧಿಸುವಂತಹ ಎದೆಗಾರಿಕೆ ಅವನದು. ಇಂತಹ ಉತ್ತಮ ಗುಣಗಳು ಅವನಲ್ಲಿದ್ದುದರಿಂದಲೇ ವ್ಯಾಸನೂ, ಶ್ರೀಕೃಷ್ಣನೂ ಅವನು ಚಿರಂಜೀವಿ ಎಂದು ಹರಸಿದರು. ಅವರ ಮಾತು ಶಾಶ್ವತವಾಗಿ ನಿಲ್ಲುವಂತೆ ಆಯಿತು. ಆ ಮಹಾಮಹಿಮರ ಮಾತು ಎಂದಿಗೂ ಸುಳ್ಳಾಗದು.

# ಕೃಪಾಚಾರ್ಯ

ಶಂತನು ಚಕ್ರವರ್ತಿ ಚಂದ್ರವಂಶದ ದೊರೆ. ಭೀಷ್ಮನ ತಂದೆ. ಮಹಾರಾಜನು ಬೇಟೆಗಾಗಿ ಕಾಡಿಗೆ ಹೋಗಿದ್ದನು. ಜೊತೆಯಲ್ಲಿ ಸೈನಿಕರು ಇದ್ದರು. ಒಂದು ಆಶ್ರಮದಲ್ಲಿ ಅವರೆಲ್ಲ ಬಿಡಾರ ಮಾಡಿದ್ದರು. ಸೈನಿಕನೊಬ್ಬನು, ಕಾಡಿನಲ್ಲಿ ತಿರುಗುತ್ತಿದ್ದಾಗ, ಆಶ್ರಮದ ಹತ್ತಿರವೇ ಇದ್ದ ಸರೋವರದ ಜೊಂಡಿನಲ್ಲಿ ಎರಡು ಸಣ್ಣ ಹಸುಳೆಗಳನ್ನು ನೋಡಿದನು. ಕೂಡಲೇ ಇದನ್ನು ಶಂತನು ರಾಜನಿಗೆ ತೋರಿಸಿದನು. ಹತ್ತಿರದಲ್ಲಿ ಬಿಲ್ಲು ಬಾಣ, ಕೃಷ್ಣಾಜಿನ, ದಂಡ ಎಲ್ಲವೂ ಬಿದ್ದಿದ್ದವು. ಯಾರೋ ಧನುರ್ವೇದಪಾರಂಗತನಾದ ಒಬ್ಬ ಋಷಿಯ ಸಂತಾನಗಳಾಗಿರಬೇಕೆಂದು ಆ ಹಸುಳೆಗಳನ್ನು ಶಂತನುರಾಜನು ತೆಗೆದುಕೊಂಡು ಬಂದು ರಾಣೀವಾಸಕ್ಕೆ ಒಪ್ಪಿಸಿದನು. ಅವುಗಳಿಗೆ ರಾಜೋಪಚಾರ ನಡೆಯಿತು. ಕಾಲಕ್ರಮದಲ್ಲಿ ಜಾತಕರ್ಮ ನಾಮಕರಣಾದಿ ಕರ್ಮಗಳೆಲ್ಲವನ್ನೂ ಶಂತನುವೇ ನಡೆಸಿದನು.

ರಾಜನ ಕೃಪೆಗೆ ಪಾತ್ರವಾದ ಗಂಡು ಮಗುವಿಗೆ ಕೃಪನೆಂದೂ, ಹೆಣ್ಣು ಮಗುವಿಗೆ ಕೃಪಿ ಎಂದೂ ನಾಮಕರಣವಾಯಿತು. ಶರದ್ವಂತ ಮಹರ್ಷಿಯು ಈ ವಿಚಾರವನ್ನು ತನ್ನ ಜ್ಞಾನ ದೃಷ್ಟಿಯಿಂದ ತಿಳಿದು, ಶಂತನುವಿಗೆ ಅವು ತನ್ನ ಮಕ್ಕಳೆಂದೂ ಅವನ್ನು ರಾಜನು ತನ್ನ ಮಕ್ಕಳೋಪಾದಿಯಲ್ಲಿ ಕಾಪಾಡಬೇಕೆಂದೂ ತಿಳಿಸಿ, ಪುನಃ ಆಶ್ರಮಕ್ಕೆ ಹೊರಟು ಹೋದನು. ಅಂದಿನಿಂದ ಕೃಪ ಕೃಪಿಯರ ಕುಲಗೋತ್ರಗಳು ಎಲ್ಲರಿಗೂ ಗೊತ್ತಾಯಿತು. ಎಲ್ಲರೂ ಅವರನ್ನು ಗೌರವದಿಂದ ಕಂಡರು. ಪ್ರಾಪ್ತ ವಯಸ್ಸು ಬಂದಮೇಲೆ ಕೃಪಿಯು ದ್ರೋಣಾಚಾರ್ಯರನ್ನು ವಿವಾಹವಾದಳು.

ಬಾಲ್ಯದಿಂದಲೇ ಕೃಪನಿಗೆ ಧನುರ್ವಿದ್ಯೆಯಲ್ಲಿ ವಿಶೇಷ ಆಸಕ್ತಿ. ಪ್ರಯೋಗ, ಸಂಹರಣ, ಕಲ್ಪ, ರಹಸ್ಯ—ಎಂಬ ನಾಲ್ಕು ಬಗೆಯ

ಧನುರ್ವೇದ ವಿದ್ಯೆಯನ್ನು ಕೃಪನು ಶರದ್ವಂತನಿಂದಲೇ ಕಲಿತನು. ಧನುರ್ವಿದ್ಯೆಯಲ್ಲಿ ಪರಮಾಚಾರ್ಯನಾದನು. ಹೀಗಿರುತ್ತಿರುವಾಗ, ಒಂದುದಿನ ಭೀಷ್ಮನು, ಕೃಪಾಚಾರ್ಯನನ್ನು ಕರೆದು, ತನ್ನ ಮೊಮ್ಮಕ್ಕಳನ್ನು ತೋರಿಸಿ, ಅವರನ್ನು ತನ್ನ ಶಿಷ್ಯರನ್ನಾಗಿ ಅಂಗೀಕರಿಸುವಂತೆ ಹೇಳಿದನು. ಹೀಗೆ ಕೃಪನು, ಕೌರವ ಪಾಂಡವರಿಗೆ ಪ್ರಥಮ ಧನುರ್ವಿದ್ಯಾಚಾರ್ಯ ನಾದನು.

ಆ ಮೇಲೆ ಗೋಗ್ರಹಣಕಾಲದಲ್ಲಿ ಕರ್ಣನು ಆತ್ಮ ಪ್ರಶಂಸೆಮಾಡಿ ಕೊಳ್ಳುತ್ತಾ ಅರ್ಜುನನನ್ನು ನಿರಾಕರಿಸಿ, ತನ್ನ ಪೌರುಷವನ್ನು ದುರ್ಯೋಧನನ ಸಂಗಡ ಹೇಳಿಕೊಳ್ಳುತ್ತಾನೆ. ಆಗ ಕೃಪಾಚಾರ್ಯನು ಸಮಯೋಚಿತವಾಗಿ ಎಚ್ಚರಿಕೆ ಕೊಡುತ್ತಾನೆ. "ರಾಧೇಯಾ! ನಿನಗೆ ಯುದ್ಧದಲ್ಲಿ ಆತುರವು ಹೆಚ್ಚು. ಕಾರ್ಯಾಕಾರ್ಯಗಳ ಪ್ರಭಾವ ನಿನಗೆ ತಿಳಿಯುವುದಿಲ್ಲ. ಮುಂದಿನ ಪರಿಣಾಮ ಹೇಗಾಗುವುದೆಂಬುದು ನಿನಗೆ ಹೊಳೆಯುವುದಿಲ್ಲ. ಶಾಸ್ತ್ರಗಳ ಆಧಾರದ ಮೇಲೆ ನಿಶ್ಚಯಮಾಡಿ ನಡೆಸಬೇಕಾದ ಅನೇಕ ನೀತಿಗಳುಂಟು. ಅಂತಹ ನೀತಿಗಳಲ್ಲಿ ಬಹಳ ಕಾಲದ ಅನುಭವವುಳ್ಳ ವಿದ್ವಾಂಸರು ಯುದ್ಧವು ಮಹಾ ಪಾಪಕರವೆಂದು ತಿಳಿಸಿದ್ದಾರೆ. ದೇಶ ಕಾಲಗಳನ್ನು ವಿಮರ್ಶೆಮಾಡಿ ನಡೆಸುವ ಯುದ್ಧವು ಜಯಪ್ರದ. ದೇಶ ಕಾಲಗಳು ಅನುಕೂಲವಾಗಿದ್ದಾಗ ನಡೆಸುವ ಯುದ್ಧವು ಮಂಗಳಕರ. ಇಲ್ಲದಿದ್ದಲ್ಲಿ ಅದು ಅಪಾಯಕರ. ಬುದ್ಧಿಶಾಲಿಯಾದವನು ದೇಶಕಾಲ ಗಳನ್ನು ನೋಡದೆ ಆತುರಪಡಬಾರದು. ಈಗ ಯುದ್ಧಮಾಡುವುದು ಉಚಿತವಲ್ಲ. ಅರ್ಜುನನು ಏಕಾಕಿಯಾಗಿ ಬಂದಿರುವನೆಂಬುದನ್ನು ನಾವು ಅಲಕ್ಷ್ಯಮಾಡುವ ಹಾಗಿಲ್ಲ. ಅವನು ಏಕಾಕಿಯಾಗಿಯೇ ಶತ್ರುಗಳನ್ನು ನಿಗ್ರಹಿಸಬಲ್ಲನು.

'ಕರ್ಣಾ! ಹಿಂದೆ ಅರ್ಜುನನು ಏಕಾಕಿಯಾಗಿ ಕೌರವರನ್ನು ಗಂಧರ್ವರಿಂದ ಬಿಡಿಸಲಿಲ್ಲವೇ? ಏಕಾಕಿಯಾಗಿ ಅಗ್ನಿಯನ್ನು ತೃಪ್ತಿಪಡಿಸ ಲಿಲ್ಲವೇ? ಏಕಾಕಿಯಾಗಿಯೇ ಸುಭದ್ರೆಯನ್ನು ರಥದಲ್ಲಿ ಕುಳ್ಳಿರಿಸಿ ಯಾದವರನ್ನೆಲ್ಲಾ ಓಡಿಸಲಿಲ್ಲವೇ? ಏಕಾಕಿಯಾಗಿ ವನವಾಸದಲ್ಲಿ ಸೈಂಧವ ನನ್ನು ಜಯಿಸಿ ದ್ರೌಪದಿಯನ್ನು ಬಿಡಿಸಲಿಲ್ಲವೇ? ಏಕಾಕಿಯಾಗಿ ಇಂದ್ರ

ನನ್ನು ಆಶ್ರಯಿಸಿ ಅನೇಕ ಅಸ್ತ್ರಗಳನ್ನು ಪಡೆಯಲಿಲ್ಲವೇ ? ಏಕಾಕಿಯಾಗಿ ಚಿತ್ರರಥನೆಂಬ ಗಂಧರ್ವರಾಜನನ್ನು ಜಯಿಸಲಿಲ್ಲವೇ ? ಏಕಾಕಿಯಾಗಿಯೆ ಪಾಂಚಾಲಿಯ ಸ್ವಯಂವರಕಾಲದಲ್ಲಿ, ಅನೇಕ ಕ್ಷತ್ರಿಯರನ್ನು ಜಯಿಸ ಲಿಲ್ಲವೇ ? ಕರ್ಣಾ ! ಆಗ ನೀನು ಎಲ್ಲಿ ಅಡಗಿಕೊಂಡಿದ್ದೆ. ನಿವಾತಕವಚರು, ಕಾಲಕೇಯರು ಮುಂತಾದ ದಾನವರನ್ನು ಅವನು ಏಕಾಕಿಯಾಗಿಯೇ ಯುದ್ಧದಲ್ಲಿ ಕೊಲ್ಲಲಿಲ್ಲವೇ ? ಅಂತಹ ಯಾವುದಾದರೊಂದು ಕೆಲಸವನ್ನು ನೀನು ಮಾಡಿರುವೆಯಾ ? ಅರ್ಜುನನೊಡನೆ ಯುದ್ಧಮಾಡಬೇಕಾದರೆ ಇಂದ್ರನಾದರೂ ಹಿಂಜರಿಯುವನು. ನೀನೇಕೆ ಆತುರಪಡುವೆ ? ಕರ್ಣಾ ! ಇದನ್ನು ನೋಡಿದರೆ, ಹಾವಿನ ಹಲ್ಲನ್ನು ಕೀಳುವುದಕ್ಕೆ ಅದರ ಬಾಯೊಳಗೆ, ನೀನು ಬಲಗೈಯನ್ನು ದೂಡುವಂತಿದೆ. ಹಿಂಡನ್ನು ಕಾಣದೆ, ಕಾಡಿನಲ್ಲಿ ಅಲೆಯುತ್ತಿರುವ ಮದದಾನೆಯ ಮೇಲೆ ಅಂಕುಶವಿಲ್ಲದೆ ಕುಳಿತು ಪುರ ಪ್ರವೇಶಮಾಡಲು ಇಷ್ಟಪಡುವೆಯಾ ? ತುಪ್ಪದಿಂದಲೂ, ವಸೆಯಿಂದಲೂ ಹುತಮಾಡಲ್ಪಟ್ಟ ದೊಡ್ಡ ಅಗ್ನಿಕುಂಡದ ಮಧ್ಯದಲ್ಲಿ, ತುಪ್ಪದಲ್ಲಿ ನೆನೆದ ನವಿರು ಬಟ್ಟೆಯುಟ್ಟು ಪ್ರವೇಶಮಾಡಲು ಇಚ್ಛಿಸುವೆಯಾ ? ದೇಹವನ್ನು ಹಗ್ಗದಿಂದ ಬಿಗಿದು, ಕಲ್ಲನ್ನು ಕತ್ತಿಗೆ ಕಟ್ಟಿಕೊಂಡು, ಸಮುದ್ರವನ್ನು ದಾಟಲು ಯಾರಾದರೂ ಇಷ್ಟಪಡುವರೇ ?

'ಕರ್ಣಾ ! ಕಳೆದ ಹದಿಮೂರು ವರ್ಷಗಳಿಂದ ಅರ್ಜುನನು ವನ ವಾಸವನ್ನೂ, ಕಷ್ಟವನ್ನೂ, ಅನುಭವಿಸಿ ಬಂದಿದ್ದಾನೆ. ಈ ಕಷ್ಟಗಳು ಯಾರಿಂದ ಉಂಟಾದುವು ? ನಮ್ಮಿಂದ ತಾನೆ ? ಕಟ್ಟನ್ನು ಕಳಚಿ ಬಿಟ್ಟ ಸಿಂಹದಂತೆ, ಈಗ ಹೊರಗೆ ಬಂದಿದ್ದಾನೆ. ಈಗೇನಾದರೂ ಅವನನ್ನು ಎದುರಿಸಿದೆಯಾದರೆ, ನಮ್ಮನ್ನು ನಿಶ್ಶೇಷವಾಗಿ ತೀರಿಸದೆ ಅವನು ಬಿಡುವವ ನಲ್ಲ. ದೊಡ್ಡ ಹತ್ತಿಯ ರಾಶಿಯನ್ನು ವ್ಯಾಪಿಸಿರುವ ಪ್ರಬಲ ಬೆಂಕಿಯನ್ನು ಆರಿಸಲು ಒಬ್ಬನಿಂದ ಸಾಧ್ಯವೇ ? ಅರ್ಜುನನನ್ನು ಎದುರಿಸುವುದಕ್ಕೆ ನಿನ್ನೊಬ್ಬನಿಂದ ಸಾಧ್ಯವಿಲ್ಲ. ನಾವೆಲ್ಲ ಒಟ್ಟಾಗಿ ನಿಂತು ಅವನೊಡನೆ ಯುದ್ಧಮಾಡಬೇಕು. ನಮ್ಮ ಸೇನೆ ಒಂದು ಕಟ್ಟುಪಾಡಿನಲ್ಲಿರಬೇಕು. ಶಸ್ತ್ರಾಸ್ತ್ರಗಳೆಲ್ಲ ಸಿದ್ಧವಾಗಿರಬೇಕು. ಕರ್ಣಾ ! ಆತುರಪಡಬೇಡ. ವಜ್ರಪಾಣಿ ಯಾದ ಇಂದ್ರನನ್ನು ಅಸುರರು ಎದುರಿಸಿದಹಾಗೆ, ನಾವುಗಳೆಲ್ಲ ಒಟ್ಟಿಗೆ

ಸೇರಿ, ಅರ್ಜುನನನ್ನು ಸುತ್ತುವರಿದು ಯುದ್ಧಮಾಡಬೇಕು. ಹಾಗಿಲ್ಲ ದಿದ್ದರೆ ಅವನನ್ನು ಜಯಿಸುವುದು ಸಾಧ್ಯವಿಲ್ಲ ” ಎಂದು ಎಚ್ಚರಿಸಿದನು.

ಆಗ ಕರ್ಣನಿಗೆ ಕೋಪವುಂಟಾಗಿ ಕೃಪಾಚಾರ್ಯನನ್ನು ಮೂದಲಿಸಿ ಮಾತನಾಡುವನು. ‘ ಓ ! ಬ್ರಾಹ್ಮಣಾ ! ನಿನ್ನಲ್ಲಿ ಮಹಾಸ್ತ್ರಗಳೆಲ್ಲಾ ಇದ್ದೂ ಏನು ಪ್ರಯೋಜನ ? ನಿನಗೇಕೆ ಯುದ್ಧದ ಯೋಚನೆ ? ಎಲ್ಲಿ ಯಾದರೂ ಭಿಕ್ಷೆಬೇಡು ಹೋಗು. ನಿಮಂತ್ರಣಕ್ಕೆ ಹೋಗು. ಪುಷ್ಕಳ ಭೋಜನ ಹುಡುಕಿಕೊಂಡು ಹೋಗು ? ಮನೆಗೆ ಹೋಗಿ ಊಟಮಾಡು. ಯುದ್ಧದ ವಿಚಾರ ನಿನಗೇಕೆ ’ ಎನ್ನುವನು. ಆಗ ಅಶ್ವತ್ಥಾಮನಿಗೆ ಕೋಪ ಬಂದು, ಕರ್ಣನನ್ನು ಕುರಿತು, ಅವನ ಜಾತಿಯಾವುದು ? ಕುಲವೇನು ? ಕರ್ಮಗಳ್ಯಾವುವು ? ದೊರೆಯ ಮುಂದೆ ನಿಂತು ಹೀಗೆಲ್ಲಾ ಹರಟುವುದು ಅತ್ಯಾಚಾರವಲ್ಲವೇ ? ಇದಕ್ಕಾಗಿ ಅವನ ನಾಲಿಗೆ ಸೀಳಬೇಡವೇ ? ಎಂದು ಜಗಳವಾಡುವನು. ಆಗ ಭೀಷ್ಮ ದ್ರೋಣಾದಿಗಳೂ, ದುರ್ಯೋಧನನೂ ಸಮಾಧಾನಪಡಿಸುವನು. ಆಮೇಲೆ ಕರ್ಣನು ಕೃಪನಲ್ಲಿ ಕ್ಷಮೆ·ಬೇಡಿದನು.

* * *

ಮುಂದೆ ಭಾರತದ ಯುದ್ಧ ನಡೆಯುತ್ತಿರುವಾಗ ಒಂದು ದಿನ ದುರ್ಯೋಧನನು ಕರ್ಣನನ್ನು ಕುರಿತು, ಪಾಂಚಾಲರನ್ನೂ, ಪಾಂಡವ ರನ್ನೂ ಧ್ವಂಸಮಾಡಲಾರೆಯಾ ! ಪಾಂಡವರ ಕೈ ಬಲವಾಗುತ್ತಿರುವುದಲ್ಲಾ ಎಂದು ಕೇಳುವನು. ಅದಕ್ಕೆ ಕರ್ಣನು ಅಟ್ಟಹಾಸದಿಂದ, ಷಣ್ಮುಖನು ದೈತ್ಯಸೇನೆಯನ್ನು ಧ್ವಂಸಪಡಿಸಿದಂತೆ, ಪಾಂಚಾಲರನ್ನು ಕೊಂದು ಸಂತೋಷವುಂಟುಮಾಡುವೆನೆಂದು ಹೇಳುವನು. ತಾನಿರುವವರೆಗೆ ದುರ್ಯೋಧನನು ಚಿಂತಿಸಬೇಕಾಗಿಲ್ಲವೆಂದು ಧೈರ್ಯಹೇಳುವನು. ಕರ್ಣನ ಹೆಮ್ಮೆಯ ಮಾತುಗಳನ್ನು ಕೇಳಿ ಕೃಪನಿಗೆ ಕೋಪಬರುವುದು. ಆದರೂ ಅದನ್ನು ತಡೆದುಕೊಂಡು ಕರ್ಣನನ್ನು ಪರಿಹಾಸ್ಯಮಾಡುತ್ತಾ ಹೀಗೆ ಹೇಳು ವನು. “ಭಲೆ ! ಕರ್ಣ ! ನೀನಿರುವವರೆಗೆ ದುರ್ಯೋಧನ ರಾಜನಿಗೇನು ಕಡಿಮೆ ? ನೀನೇ ಅವನ ದಿಕ್ಕಲ್ಲವೇ ? ಇನ್ಯಾರೂ ಬೇಡ ತಾನೆ ? ಎಲೈ ! ಸೂತಾ ! ಈ ಒಣ ಜಂಬದ ಮಾತುಗಳಿಂದಲೆ ದುರ್ಯೋಧನನನ್ನು

ಮರುಳುಮಾಡುತ್ತಾ ಬಂದಿರುವೆ. ಈಗಾಗಲೇ ನೀನು ಎಷ್ಟು ಸಲ ಯುದ್ಧ ಮಾಡಿರುವೆ? ಎಷ್ಟುಸಲ ಸೋತು ಬಂದಿರುವೆ? ನೀನು ದುರ್ಯೋಧನನನ್ನು ಗಂಧರ್ವರು ಎಳೆದುಕೊಂಡು ಹೋಗುತ್ತಿದ್ದಾಗ ಎಲ್ಲಿ ಹೋಗಿದ್ದೆ? ವಿರಾಟನಗರದಲ್ಲಿ ಕೌರವರು ಪರಾಜಿತರಾದಾಗ, ನಿನ್ನ ಶೌರ್ಯ ಎಲ್ಲಿ ಹೋಗಿತ್ತು? ನಿನ್ನ ಗರ್ಜನೆಗಳು ಕೆಲಸಕ್ಕೆ ಬಾರದವು. ದುರ್ಯೋಧನನ ಮುಂದೆಯೇ ನಿನ್ನ ಜಂಭದ ಮಾತುಗಳು. ಅರ್ಜುನನ ಬಾಣಗಳು ಬಂದು ನಿನ್ನನ್ನು ಇರಿಯುವಾಗ, ನಿನ್ನ ಗರ್ಜನೆಗಳು ಅಡಗಿಹೋಗುವುವು ಅಲ್ಲವೇ? ಕ್ಷತ್ರಿಯರು ಬಾಹುಬಲದಲ್ಲಿ ಶೂರರು. ಬ್ರಾಹ್ಮಣರು ಮಾತಿನಲ್ಲಿ ಶೂರರು. ಅರ್ಜುನನು ಧನುರ್ವಿದ್ಯೆಯಲ್ಲಿ ಶೂರನು. ಕರ್ಣನಾದರೋ ಬರೀ ಮನೋರಥದಲ್ಲಿ ಶೂರನು. ಅರ್ಜುನನು ಸಾಮಾನ್ಯನಲ್ಲ. ಸಾಕ್ಷಾತ್ ಪರಶಿವನನ್ನು ಪ್ರತ್ಯಕ್ಷಮಾಡಿಕೊಂಡು ಅಸ್ತ್ರಗಳನ್ನು ಪಡೆದು ಬಂದಿರುವನು. ಅಂತಹ ಪಾರ್ಥನನ್ನು ಎದುರಿಸಿ ಹೊಡೆಯಬಲ್ಲವನಾರು. ಕರ್ಣಾ! ನಮ್ಮ ರಾಜನನ್ನು ಏಕೆ ಮರುಳುಮಾಡುತ್ತಿರುವೆ. ಆತ್ಮಸ್ತುತಿಯು ಮಹಾಪಾಪ!' ಎಂದನು.

ಕೃಪನ ಮಾತುಗಳನ್ನು ಕರ್ಣನಿಂದ ಸಹಿಸಲಾಗಲಿಲ್ಲ. ಕೋಪದಿಂದ ಅವನ ಕಣ್ಣುಗಳು ಕೆಂಡದಂತಾದುವು. ಯಾರು ಮನಸ್ಸಿಟ್ಟು ಕೆಲಸಮಾಡುವರೋ ಅಂತಹರಿಗೆ ದೈವಸಹಾಯ ಇದ್ದೇ ಇರುವುದು. ಯುದ್ಧಮಾಡುವವರು ಪರಾಕ್ರಮ ಹೇಳಿಕೊಂಡರೆ ಅದರಲ್ಲಿ ದೋಷವೇನು? ತನಗೆ ವ್ಯವಸಾಯದ ಬಲ ಇದ್ದೇ ಇದೆ. ಮನಸ್ಸುಮಾಡಿದ ಕಾರ್ಯವನ್ನು ನಿರ್ವಹಿಸದೆ ಬಿಡತಕ್ಕವನಲ್ಲ. ತಾನು ಗರ್ಜಿಸಿದ ಮಾತ್ರಕ್ಕೆ ಕೆಟ್ಟುಹೋದುದೇನು? ಕೃಷ್ಣ ಸಾತ್ಯಕಿಯರೊಡನೆ ಪಾಂಡವರನ್ನು ಕೊಂದು, ಇಡೀ ಭೂಮಂಡಲವನ್ನು ನಿಷ್ಕಂಟಕಮಾಡಿ ತನ್ನ ರಾಜನಾದ ದುರ್ಯೋಧನನಿಗೆ ತಾನು ಒಪ್ಪಿಸುವೆನೆಂದು ಹೇಳಿದನು.

ಕೃಪಾಚಾರ್ಯನಿಗೆ ನಗುವುಂಟಾಯಿತು. ಕರ್ಣನನ್ನು ಹಾಸ್ಯ ಮಾಡುತ್ತಾ, 'ಕರ್ಣಾ! ಈ ವ್ಯರ್ಥವಾದ ಪ್ರಲಾಪಗಳನ್ನು ಬಿಡು. ಇವನ್ನು ನಾನು ಕೇಳಲಾರೆ. ನೀನು ಯಾವಾಗಲೂ ಕೃಷ್ಣಾರ್ಜುನರನ್ನು ಹಳಿಯುತ್ತಿರುವೆ. ಕೃಷ್ಣನಿದ್ದ ಕಡೆ ಜಯ ಸಿದ್ಧ. ಕೃಷ್ಣಾರ್ಜುನರು

ಯುದ್ಧ ವಿಶಾರದರು. ಅವರನ್ನು ಜಯಿಸಲು ಯಾರಿಂದಲೂ ಸಾಧ್ಯವಿಲ್ಲ. ಧರ್ಮರಾಜನು ಸಾಮಾನ್ಯನೇ ? ಧರ್ಮನಿರತನು, ಸುಶಿಕ್ಷಿತನು, ಧೀರನು, ಕೃತಜ್ಞನು. ಧರ್ಮಾತ್ಮವಾದ ತನ್ನ ದೃಷ್ಟಿಯಿಂದ ಇಡೀ ಜಗತ್ತನ್ನು ಬೇಕಾದರೂ ದಹಿಸಬಲ್ಲ ಶಕ್ತಿಯುಳ್ಳವನು. ಇವನ ಸಹಾಯಕ್ಕಾಗಿ ಸಾಕ್ಷಾತ್ ಅಪ್ರಮೇಯ ಪ್ರಭಾವವುಳ್ಳ ಶ್ರೀಕೃಷ್ಣನೇ ಕೈಕಟ್ಟಿ ನಿಂತಿರುವಾಗ ಅವರನ್ನು ಜಯಿಸಲು ನಿನ್ನಿಂದ ಸಾಧ್ಯವೇ ? ಅವರೆದುರಿಗೆ ನಿಂತು ಯುದ್ಧಮಾಡುತ್ತೇನೆಂದು ಮನಸ್ಸುಮಾಡಿರುವುದೇ ದೊಡ್ಡ ತಪ್ಪು' ಎಂದು ಕೃಪಾಚಾರ್ಯನು ಹೇಳಿದನು.

ಕರ್ಣನು ಹೆಮ್ಮೆಯಿಂದ ನಗುತ್ತಾ, ಇಂದ್ರನಿಗೂ ಅಜೇಯರಾಗಿರುವ ಪಾಂಡವರನ್ನು ತಾನು ಜಯಿಸುವೆನೆಂದೂ, ಕೃಪಾಚಾರ್ಯನು ಪಾಂಡವ ಪಕ್ಷಪಾತಿ ಎಂದೂ, ಅವನಿಗೆ ಮೋಹದಿಂದ ಬುದ್ಧಿ ಕೆಟ್ಟು ಹೋಗಿದೆ ಎಂದೂ, ಆದುದರಿಂದಲೇ ಅವನ ಬಾಯಿಂದ ಕೆಟ್ಟಮಾತುಗಳು ಬರುತ್ತಿವೆ ಎಂದೂ ಹೇಳುವನು. ಬ್ರಾಹ್ಮಣನಾದ ಅವನಿಗೆ ಯುದ್ಧದ ವಿಷಯವೇಕೆಂದು ಮೂದಲಿಸುವನು. ಕೌರವರ ಕಡೆ ಧೀರರಿಲ್ಲವೇ ? ವೀರಾಧಿವೀರರಿಲ್ಲವೇ ? ಭೀಷ್ಮ, ದ್ರೋಣ, ಅಶ್ವತ್ಥಾಮ, ದುರ್ಯೋಧನ, ದುಶ್ಶಾಸನ–ಇವರು ಸಾಮಾನ್ಯರೇ ? ಎಂತಹ ಬಲಾಢ್ಯರಿಗೂ ಜಯವೆಂಬುದು ದೈವಾಯತ್ತವಾದುದು. ಹೀಗಿರುವಾಗ ಶತ್ರುಗಳನ್ನು ಪ್ರಶಂಸೆ ಮಾಡಿ, ಸ್ವಪಕ್ಷವನ್ನು ಹಳಿಯುವುದು ದೊಡ್ಡ ಅಪರಾಧ. ಇನ್ನೇನಾದರೂ ಕೆಟ್ಟ ಮಾತುಗಳನ್ನಾಡಿದರೆ, ಕೃಪನ ನಾಲಿಗೆಯನ್ನು ಕತ್ತರಿಸಿಬಿಡುವೆನೆಂದು ಕರ್ಣನು ಕೋಪದಿಂದ ಕತ್ತಿಯನ್ನು ಕೈಗೆ ತೆಗೆದುಕೊಳ್ಳುವನು.

ಹತ್ತಿರದಲ್ಲಿದ್ದ ಅಶ್ವತ್ಥಾಮನಿಗೆ ಕರ್ಣನ ಮಾತುಗಳು ಉರಿಯುವ ಕೋಪವನ್ನುಂಟುಮಾಡಿತು. ಅರ್ಜುನನು ಜಯದ್ರಥನನ್ನು ಕೊಂದಾಗ ಕರ್ಣನ ಶೌರ್ಯ ಎಲ್ಲಿ ಅಡಗಿಹೋಗಿತ್ತು ? ಅರ್ಜುನನು ದುರ್ಜಯನೆಂಬುದರಲ್ಲಿ ಸಂದೇಹವಿಲ್ಲ. ಕೆಟ್ಟ ಮಾತುಗಳನ್ನಾಡುತ್ತಿರುವ ಕರ್ಣನ ತಲೆಯನ್ನು ಕಡಿದು ಹಾಕುವೆನೆಂಬುದಾಗಿ ಅಶ್ವತ್ಥಾಮನು ಮುಂದೆ ಬರುವನು. ಆಗ ಕೃಪಾಚಾರ್ಯನು ಅಶ್ವತ್ಥಾಮನನ್ನು ಸಮಾಧಾನಪಡಿಸಿ, ಕರ್ಣನ ಅಪರಾಧವನ್ನು ಮನ್ನಿಸಬೇಕಾಗಿ ತಿಳಿಸಿದನು.

ಎಲ್ಲ ಧೀರರಂತೆ ಕೃಪಾಚಾರ್ಯನೂ ಕೂಡ, ಮಹಾಭಾರತ ಯುದ್ಧದಲ್ಲಿ ಶರಭವು ಸಿಂಹವನ್ನು ತಡೆದಂತೆ, ಪ್ರದ್ಯುಮ್ನನನ್ನು ಎದುರಿಸಿದನು. ಕೃಪಾಚಾರ್ಯನು ದಿವ್ಯಾಸ್ತ್ರವೀರನು. ಉದಾರ ಬುದ್ಧಿಯುಳ್ಳವನು. ಶೌರ್ಯದಲ್ಲಿ ದ್ರೋಣಾಚಾರ್ಯರಿಗೆ ಸಮ. ಕೋಪದಿಂದ ಯುದ್ಧ ಪ್ರಾರಂಭಿಸಿದರೆ, ಕಾಲಯಮನನ್ನು ಮೀರಿಸುವಷ್ಟು ಸಾಮರ್ಥ್ಯವಿತ್ತು ಅವನಲ್ಲಿ. ದೃಷ್ಟದ್ಯುಮ್ನನನ್ನು ಎದುರಿಸಿ ಬಾಣ ಪ್ರಯೋಗಮಾಡಲು, ಅವನ ಪ್ರಹಾರವನ್ನು ತಡೆಯಲು ಅವನಿಂದಾಗಲಿಲ್ಲ. ಅರ್ಜುನನಿದ್ದ ಸ್ಥಳಕ್ಕೆ ಓಡಿದನು. ಕೃಪಾಚಾರ್ಯನು ಮತ್ತಷ್ಟು ಉತ್ಸಾಹದಿಂದ ನೂರಾರು ಬಾಣಗಳನ್ನು ಕರೆಯುತ್ತ ದೃಷ್ಟದ್ಯುಮ್ನನನ್ನು ಬೆನ್ನಟ್ಟಿ ಮೇಲೆ ಮೇಲೆ ಶಂಖವನ್ನೂದಿದನು.

ಯುದ್ಧದಲ್ಲಿ ಭೀಷ್ಮ, ದ್ರೋಣ. ಕರ್ಣ ಮುಂತಾದ ವೀರಾಧಿ ವೀರರೆಲ್ಲ ಸಾಯುವರು. ಇವರೆಲ್ಲ ಹೋದಮೇಲೆ ದುರ್ಯೋಧನನ ಪರಿಸ್ಥಿತಿ ಚಿಂತಾಜನಕದ್ದಾಯಿತು. ಇದನ್ನು ಕಂಡು ಕೃಪನಿಗೆ, ಅವನ ವಿಚಾರದಲ್ಲಿ ಅಪಾರ ಕನಿಕರ ಹುಟ್ಟಿತು. ರಾಜನನ್ನು ನೋಡಿ ದುಃಖಪಟ್ಟನು. ಅವನನ್ನು ಕುರಿತು 'ಕುರುರಾಜಾ! ದುರ್ಯೋಧನಾ! ನನ್ನ ಮಾತನ್ನು ಕೇಳು. ಕ್ಷತ್ರಿಯನಿಗೆ ಯುದ್ಧ ಮಾಡುವುದು ಧರ್ಮ. ಎದುರಿಗೆ ಬಂದವರು ಯಾರೇ ಆಗಿರಲಿ, ಒಂದು ಪಕ್ಷ ಮಗನೇ ಆಗಿರಲಿ, ತಂದೆಯೇ ಆಗಿರಲಿ, ಬಂಧುವೇ ಆಗಿರಲಿ, ಸಹೋದರನೇ ಆಗಿರಲಿ, ಅವನನ್ನು ಎದುರಿಸ ಬೇಕಾದುದು ಧರ್ಮ. ಕೊಲ್ಲುವುದರಲ್ಲಿ ಕೂಡ ದೋಷವಿಲ್ಲ. ಇದೂ ಧರ್ಮವೇ! ಆದರೆ ಯುದ್ಧಭೂಮಿಯಿಂದ ಓಡಿಹೋಗುವುದು ಅಧರ್ಮ. ಹಾಗೆ ಮಾಡುವುದು ಮಹಾಪಾಪ. ಜೀವದಾಸೆಯಿಂದ ಓಡಿಹೋಗುವ ಕ್ಷತ್ರಿಯನ ಬದುಕು ಬದುಕೇ ಅಲ್ಲ. ಅದು ಬರೀ ಭಂಡ ಬಾಳು. ಈಗ ನೋಡು! ಮಹಾರಾಜಾ! ಭೀಷ್ಮ, ದ್ರೋಣರು ಹತರಾದರು. ಶೂರನಾದ ಕರ್ಣ ಸತ್ತುಹೋದ. ನಿನ್ನ ಸಹೋದರರು, ಮಗ ಎಲ್ಲರೂ ಕೊಲ್ಲಲ್ಪಟ್ಟರು. ಇನ್ನಾರು ನಮಗೆ ದಿಕ್ಕು? ನಾವು ಯಾರಲ್ಲಿ ಹೆಚ್ಚು ನಂಬಿಕೆ ಇಟ್ಟಿದ್ದೆವೋ, ಯಾರಿಂದ ರಾಜ್ಯವೂ ಲಭಿಸುವುದೆಂದು ಆಸೆ ಇಟ್ಟಿದ್ದೆವೋ, ಅವರೆಲ್ಲ ನಾಶವಾದರು. ಪಾರ್ಥನ ಹನುಮ ಧ್ವಜವನ್ನು ಕಂಡಕೂಡಲೇ

ನಮ್ಮ ಸೈನ್ಯ ಭಯದಿಂದ ಓಡುವುದು. ಕೌರವರಾಜಾ ! ಭೀಮನ ಸಿಂಹನಾದ ಕೇಳಿ, ಪಾಂಚಜನ್ಯದ ಶಬ್ದ ಕಿವಿಗೆ ಬಿದ್ದೊಡನೆ, ಗಾಂಡೀವ ಧ್ವನಿ ಕೇಳಿ, ನನ್ನ ಮನಸ್ಸು ತಳಮಳಗೊಳ್ಳುತ್ತಿದೆ. ಹದಿನೇಳು ದಿವಸದ ಘೋರ ಯುದ್ಧವನ್ನು ನೀನೇ ಕಣ್ಣಾರೆ ನೋಡಿರುವೆ. ಎಲ್ಲಿ ನೋಡಿದರೂ ಕೃಷ್ಣಾರ್ಜುನರೇ ? ಸಮುದ್ರದಂತೆ ದೊಡ್ಡದಾಗಿದ್ದ ನಮ್ಮ ಸೈನ್ಯವು ಹರಿದು ಹಂಚಿ, ಛಿನ್ನಭಿನ್ನವಾಯಿತು. ಇಷ್ಟೆಲ್ಲಾ ಆದರೂ, ನಿನ್ನ ರಾಧೇಯನೇನು ಮಾಡಿದ? ಆಚಾರ್ಯ ಪುತ್ರನೆಲ್ಲಿಗೆ ಹೋದ? ಭೀಷ್ಮ, ದ್ರೋಣರೇನು ಮಾಡಿದರು ? ನಾನು ನೀನೂ ಏನು ತಾನೆ ಮಾಡಿದೆವು ? ಇನ್ನು ಯಾರನ್ನು ತಾನೆ ನಂಬಿ ಯುದ್ಧ ಮಾಡಬಲ್ಲೆವು ? ಜಗತ್ತಿನಲ್ಲಿ ಅರ್ಜುನನನ್ನು ಜಯಿಸುವವರು ಯಾರಿದ್ದಾರೆ? ನಾಯಕನಿಲ್ಲದೆ ನಮ್ಮ ಸೇನೆ ತಲ್ಲಣಿಸುತ್ತಿದೆ. ಚಂದ್ರನಿಲ್ಲದ ರಾತ್ರಿಯಂತಾಗಿದೆ. ದುರ್ಯೋಧನಾ ! ಸ್ವಪ್ರಯೋಜನಕ್ಕಾಗಿ ನೀನು ಯುದ್ಧ ಹೂಡಿದೆ. ಎಲ್ಲರೂ ಸತ್ತರು. ಹೋಗಲಿ. ನೀನಾದರೂ ಉಳಿದರೆ, ಎಲ್ಲರೂ ಉಳಿದಂತೆ. ಪಾತ್ರೆ ಒಡೆದರೆ ಅದರಲ್ಲಿರುವ ನೀರೂ ಚೆಲ್ಲಿಹೋಗುವುದಿಲ್ಲವೇ ?

'ದುರ್ಯೋಧನಾ ! ಕುರುರಾಜಾ ! ! ಕೇಳು. ಕ್ಷೀಣಗತಿಗೆ ಬಂದವನು ಪ್ರಬಲರಾದವರೊಡನೆ ಸಂಧಿಮಾಡಿಕೊಳ್ಳಬೇಕು. ಪ್ರಬಲ ದೆಶೆಗೆ ಬರುತ್ತಿರುವವನು, ಕ್ಷೀಣಿಸುವವನೊಡನೆ ಯುದ್ಧ ಹೂಡಬೇಕು. ದೇವಗುರು ಬೃಹಸ್ಪತ್ಯಾಚಾರ್ಯನು ಹೇಳಿದ್ದು ಇದು. ಈಗ ನಾವು ತಗ್ಗಿರುವೆವು. ಪಾಂಡವರು ಪ್ರಬಲರಾಗಿದ್ದಾರೆ. ಅವರೊಡನೆ ಸಂಧಿಮಾಡಿಕೊಳ್ಳುವುದು ಯುಕ್ತ. ನಿನ್ನ ತಂದೆಯಮಾತನ್ನು ಧರ್ಮರಾಜ ಮೀರುವುದಿಲ್ಲ. ಶ್ರೀಕೃಷ್ಣನ ಮಾತಿನಲ್ಲಿ ಅವನಿಗೆ ಅಪಾರ ನಂಬಿಕೆ. ಅವನು ಹೇಳಿದಂತೆ ಕೇಳುವನು. ನಿನ್ನ ಹಿತಕ್ಕಾಗಿ ನಾನು ಹೇಳುತ್ತಿರುವೆನು ಈ ಮಾತುಗಳನ್ನು. ಪ್ರಾಣಭಯದಿಂದಾಗಲಿ, ದೈನ್ಯದಿಂದಾಗಲಿ ನಾನು ಹೀಗೆ ಹೇಳುತ್ತಿಲ್ಲ. ನಾನು ಹೇಳಿದ ತತ್ವವನ್ನು ನೀನು ಅಂತ್ಯಕಾಲದವರೆಗೆ ನೆನಸುವೆ' ಎಂದು ಹೇಳುತ್ತಾ, ಕೃಪಾಚಾರ್ಯನು ನಿಟ್ಟುಸಿರು ಬಿಟ್ಟು ಹಾಗೆಯೇ ಮೂರ್ಛಿತನಾದನು.

ಸ್ವಲ್ಪ ಹೊತ್ತಾದಮೇಲೆ, ಕೃಪಾಚಾರ್ಯನು ಎದ್ದು ಕುಳಿತನು. ಆಗ ದುರ್ಯೋಧನನು, ಅವನ ಮಾತುಗಳನ್ನು ಪ್ರಶಂಸೆ ಮಾಡಿದನು. ಮರಣಾವಸ್ಥೆಯಲ್ಲಿರುವವನಿಗೆ ಔಷಧಿ ಹೇಗೆ ಹಿಡಿಸುವುದಿಲ್ಲವೋ, ಹಾಗೆ ಅವನ ಮಾತುಗಳು ತನಗೆ ಪ್ರಿಯವನ್ನುಂಟುಮಾಡುತ್ತಿಲ್ಲ. ಯಾರು ತಾನೆ ಈಗ ತನ್ನನ್ನು ನಂಬುವರು. ದೂತನಾಗಿ ಬಂದ ಕೃಷ್ಣನನ್ನು ತಾನು ವಂಚಿಸಿದೆನಲ್ಲಾ ? ದ್ರೌಪದಿಗೆ ಅಪಚಾರವೆಸಗಲಿಲ್ಲವೇ ? ಅಭಿಮನ್ಯುವಿನ ಮರಣದಿಂದ ಪಾಂಡವರಿಗೆ ಆದ ದುಃಖ ಎಷ್ಟು ? ಅಂತಹ ಕಷ್ಟವನ್ನುಂಟುಮಾಡಿದ ತನ್ನೊಡನೆ ಪಾಂಡವರು ಸಂಧಿಗೆ ಹೇಗೆ ತಾನೆ ಒಪ್ಪುವರು ?

ಕೃಪಾಚಾರ್ಯನು ಬಹು ಮೇಧಾವಿ. ಶಾಂತಿ ಸ್ವಭಾವ ಅವನದು. ಕಾರ್ಯಾಕಾರ್ಯವಿವೇಚನೆಯುಳ್ಳವನು. ಸರಿ ಹೊತ್ತಿನಲ್ಲಿ ಪಾಂಚಾಲರೆಲ್ಲ ಸುಖನಿದ್ರೆಯಲ್ಲಿರುವಾಗ ಅವರನ್ನೆಲ್ಲ ಕೊಂದುಬರುವೆನೆಂದು ಅಶ್ವತ್ಥಾಮನು ಹೇಳಿದಾಗ, ಅಶ್ವತ್ಥಾಮನಿಗೆ ಸಮಾಧಾನ ಹೇಳುವನು. ಆತುರಪಡಬೇಡವೆಂದು ಎಚ್ಚರಿಕೆ ಕೊಡುವನು. 'ವತ್ಸಾ ! ಅಶ್ವತ್ಥಾಮಾ ! ನಾನು ಹೇಳುವುದನ್ನು ಗಮನವಿಟ್ಟು ಕೇಳು. ಮನುಷ್ಯನು ದೈವದಿಂದ ಬಂಧಿತನಾಗಿದ್ದಾನೆ. ದೈವ, ಪುರುಷ, ಇವೆರಡೂ ಲೋಕವನ್ನು ಬಂದಿಸಿರುವುವು. ಬರೀ ದೈವಸಹಾಯದಿಂದಲೇ ಕಾರ್ಯಸಿದ್ಧಿಯಾಗುವುದಿಲ್ಲ. ಬರೀ ಪುರುಷ ಪ್ರಯತ್ನದಿಂದಲೇ ಕಾರ್ಯ ನಡೆಯುವುದಿಲ್ಲ. ಬೆಟ್ಟದ ಮೇಲೆ ಮಳೆ ಆದರೆ ಏನು ಪ್ರಯೋಜನ. ಸಾಗುಭೂಮಿ ಇರುವ ಕಡೆ ಆದರೆ ಬೆಳಸು ಚನ್ನಾಗಿ ಬೆಳೆಯುವುದು. ಕೇವಲ ಮಾನವ ಪ್ರಯತ್ನವಾಗಲಿ, ಮಾನವ ಯತ್ನವೇ ಇಲ್ಲದ ದೈವಶಕ್ತಿಯಾಗಲಿ, ಎಲ್ಲಿಯೂ ಯಾವಾಗಲೂ, ಪ್ರಯೋಜನಕಾರಿಯಾಗಿಲ್ಲ. ಪ್ರಯತ್ನವಿಲ್ಲದೆ ಕಾರ್ಯಸಿದ್ಧಿ ಪಡೆದವನಾಗಲಿ, ಪ್ರಯತ್ನಮಾಡಿ ದೈವಸಹಾಯವಿಲ್ಲದೆ ಯಶಸ್ವಿಯಾದವನಾಗಲಿ, ಲೋಕದಲ್ಲಿ ಯಾರೂ ಇಲ್ಲ. ಹೀಗೆ ದೈವವು ಪುರುಷಕಾರದಿಂದಲೂ, ಪುರುಷಕಾರವು ದೈವದಿಂದಲೂ ಕೂಡಿ ಅನ್ಯೋನ್ಯವಾಗಿರಬೇಕು. ಮನುಷ್ಯರು, ಆಗಾಗ ಹಿರಿಯರನ್ನು ಕೇಳಬೇಕು, ಅವರಿಂದ ಕಲಿಯಬೇಕು. ಅವರ ಬುದ್ಧಿವಾದವನ್ನೂ, ಅನುಭವವನ್ನೂ ಕೇಳಿ

ಅದರಂತೆ ನಡೆಯಬೇಕು. ಹಾಗಿಲ್ಲದೆ, ಯಾವನು ಕಾಮ, ಕೋಪ, ಭಯ, ಲೋಭಗಳ ಸಹಾಯದಿಂದ ಕಾರ್ಯಸಿದ್ಧಿ ಪಡೆಯಲು ಇಷ್ಟ ಪಡುವನೋ, ಅಂತಹವನು ಅಪಮಾನಪಟ್ಟು, ಅಸಹಾಯನಾಗಿ ಜಾರಿ ಬೀಳುವನು. ನಮ್ಮ ರಾಜ ದುರ್ಯೋಧನನು ಹಾಗೆ ಮಾಡಿದನು. ಹಿರಿಯರ ಹಿತನುಡಿಗಳನ್ನು ಕೇಳಲಿಲ್ಲ. ಅಯೋಗ್ಯರೂ, ಅಲ್ಪರೂ, ಅನಾದರಿಗಳೂ ಆದವರೊಡನೆ ಆಲೋಚಿಸಿ ಅಸಂಬದ್ಧ ಕಾರ್ಯಗಳನ್ನು ಕೈಗೊಂಡನು. ಇದರಿಂದ ಎಂತಹ ಅನರ್ಥ ಸಂಭವಿಸಿತು ? ತನಗೆ ತಾನೇ ಕೇಡು ತಂದುಕೊಂಡುದಲ್ಲದೆ ಇತರರಿಗೂ ಕೇಡನ್ನುಂಟುಮಾಡಿದನು. ಅಶ್ವತ್ಥಾಮಾ ! ನೀನು ಇದರಿಂದ ಪಾಠ ಕಲಿಯಬೇಡವೇ ? ಅವನ ಹಾಗೆ ನೀನು ಮಾಡಬೇಡ. ತಿಳಿದವರಲ್ಲಿ ಹೋಗಿ ಕೇಳೋಣ. ಬುದ್ಧಿವಂತ ನಾದ ವಿದುರನಿದ್ದಾನೆ. ಮಹಾ ಯಶಸ್ವಿನಿಯಾದ ಗಾಂಧಾರಿ ಇದ್ದಾಳೆ. ವಯೋವೃದ್ಧನಾದ ಧೃತರಾಷ್ಟ್ರ ರಾಜನಿದ್ದಾನೆ. ಆತುರಪಡಬೇಡ. ಅವರನ್ನು ಕೇಳಿ ಅವರು ಹೇಳಿದಂತೆ ನಡೆಸೋಣ' ಎಂದು ಸಲಹೆ ಇತ್ತನು. ಆದರೆ ಅಶ್ವತ್ಥಾಮನು ಆ ಸಲಹೆಯನ್ನು ಗಮನಿಸಲೇ ಇಲ್ಲ.

ಭೀಷ್ಮ ದ್ರೋಣ ಕೃಪಾಚಾರ್ಯರು ಮಹಾಭಾರತದಲ್ಲಿ ಬರುವ ಪ್ರಮುಖ ಪಾತ್ರಗಳು. ಇವರ ಹೆಸರು ಪ್ರಸಿದ್ಧಿಯಾಗಿವೆ. ಆದರೂ ಭೀಷ್ಮರ ದ್ರೋಣರ ವಿಷಯವಾಗಿ ದೊರೆಯುವಷ್ಟು ವಿಷಯಗಳು ಕೃಪಾಚಾರ್ಯರ ವಿಷಯದಲ್ಲಿಲ್ಲ. ಇದರಿಂದ ಕೃಪಾಚಾರ್ಯರ ಪ್ರಾಶಸ್ತ್ಯಕ್ಕೆ ಕುಂದಕವೇನೂ ಇಲ್ಲ. ಕೃಪಾಶ್ವತ್ಥಾಮರ ಸಂವಾದ, ಧುರ್ಯೋಧನನಿಗೆ ಅವನು ಹೇಳುವ ಬುದ್ಧಿಮಾತುಗಳು, ಕರ್ಣನಿಗೆ ಹೇಳುವ ನೀತಿ, ಅವನ ಧರ್ಮ ಪಕ್ಷಪಾತ, ಅನುಭವ, ಕರ್ತವ್ಯನಿಷ್ಠೆ, ಧರ್ಮನೀತಿಜ್ಞಾನ ಇವೆಲ್ಲ ಅವನ ಸದ್ಗುಣ ಗಳನ್ನು ವ್ಯಕ್ತಪಡಿಸುವುವು.

ಕೃಪಾಚಾರ್ಯನ ಜೀವನ ಉದಾತ್ತವಾದುದು ಅನುರವಾದುದು. ಸರ್ವಾದರಣೀಯವಾದುದು. ಭೀಷ್ಮ ದ್ರೋಣರಿಗಿಂತ ಮಹಿಮೆಯುಳ್ಳ ವನು ಅವನು. ಸತ್ಕುಲಪ್ರಸೂತನೂ, ಮಹಾಮಹಿಮನೂ ಆದ ಸೂರ್ಯ ವಂಶದ ರಾಜಕುಮಾರನ ಪಾದ ತಗುಲಿದ ಕೂಡಲೆ, ಒಂದು ಬಂಡೆ ಹೆಣ್ಣಾ ಯಿತು. ಆದೇ ಕುಲಕ್ಕೆ ಮೂಲಪುರುಷನಾದ ಸೂರ್ಯನು ಬೆಳಗಿನಿಂದ

ಸಂಜೆಯವರೆಗೆ ತನ್ನ ಕಿರಣಗಳಿಂದ ಬಂಡೆಯನ್ನು ಸ್ಪರ್ಶಮಾಡುತ್ತಿದ್ದರೂ ಅದು ಹೆಣ್ಣಾಗಲೇ ಇಲ್ಲ. ಸತತವಾಗಿ ಪರೋಪಕಾರಕ್ಕಾಗಿ ಹೇಳುವ ಮಾತುಗಳು ಅಮೃತ ಸಮಾನ. ಅಂತಹವರ ಮನಸ್ಸು ಸಾಗರದಷ್ಟು ವಿಶಾಲವಾದುದು. ಅವರ ಕೀರ್ತಿ ಶರತ್ಕಾಲದ ಚಂದ್ರಿಕೆಯಂತೆ ಹರಡುವುದು. ಹಾಗೆಯೇ ಕೃಪಾಚಾರ್ಯನ ಕೀರ್ತಿ ಜಗಜ್ಜನಿತವಾಗಿದೆ. ಆದುದರಿಂದಲೇ ಅವನಿಗೆ ಚಿರಂಜೀವಿ ಪಟ್ಟ ದೊರೆತುದು. ಇಂತಹ ಪುಣ್ಯಪುರುಷರು ಅತಿ ವಿರಳ. ಅವರ ನಾಮಸ್ಮರಣೆ ಮಾಡುವುದರಿಂದ ಪುಣ್ಯ ಬರುವುದು.



ದಿ ಈಸ್ಟರ್ನ್ ಪ್ರೆಸ್, ೧೧-ಎ, ಜಯಚಾಮರಾಜ ರಸ್ತೆ, ಬೆಂಗಳೂರು-೨,

## ಗ್ರಂಥಕರ್ತರ ಇತರ ಪುಸ್ತಕಗಳು

| | | | |
|---|---|---|---|
| ರೈತನ ಬಾಳು | . . | ರೂ. | 1-8-0 |
| ರೈತನ ಸಮಾಜ | . . | ,, | 1-12-0 |
| ರಾಜರ್ಷಿ | . . | ,, | 1-0-0 |
| ಗ್ರಾಮ ಪಂಚಾಯಿತಿಗಳು | . . | ,, | 1-12-0 |

ರೈತನ ಪ್ರಪಂಚ } ಪ್ರತಿಗಳಿಲ್ಲ
ರೈತನ ಏಳಿಗೆ }



ಈಸ್ಟರ್ನ್ ಪ್ರೆಸ್